# ಮಕ್ಕಳ ಅಭ್ಯುದಯ - ರಾಷ್ಟ್ರದ ಸಂಪತ್ತು

ಗಜೇಂದ್ರಗಡ ಶಾಮರಾಯ



ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು

47

# ಮಕ್ಕಳ ಅಭ್ಯುದಯ
# - ರಾಷ್ಟ್ರದ ಸಂಪತ್ತು

ಗಜೇಂದ್ರಗಡ ಶಾಮರಾಯ




ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

MAKKALA ABHYUDAYA - RASHTRADA SAMPATTU
by Gajendragada Shamaraya, Published by Bangalore University, Bangalore, Pp 74+viii


ಪ್ರಥಮ ಮುದ್ರಣ 1977
ದ್ವಿತೀಯ ಮುದ್ರಣ 1982

ಪ್ರಕಾಶಕರು :

ಕೆ. ಸಿ. ಶಿವಪ್ಪ
ಕಾರ್ಯನಿರ್ವಾಹಕ ನಿರ್ದೇಶಕ, ಪ್ರಸಾರಾಂಗ
ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು

ಪ್ರಕಟಣ ಸಹಾಯಕ :
ಪುಂಡಲೀಕ ಹಾಲಂಬಿ

ಬೆಲೆ : 50 ಪೈಸೆ

ಮುದ್ರಣ :
ಬೆಂಗಳೂರು ವಿಶ್ವವಿದ್ಯಾಲಯ ಮುದ್ರಣಾಲಯ, ಬೆಂಗಳೂರು

## ಮುನ್ನುಡಿ

ವಿಶ್ವವಿದ್ಯಾಲಯಗಳು ಕೇವಲ ತಿಳುವಳಿಕೆಯ ಕೇಂದ್ರಗಳಾದರೆ ಸಾಲದು. ಅವು ಸುತ್ತಮುತ್ತಲಿನ ಜನತೆಯ ಶೈಕ್ಷಣಿಕ–ಸಾಂಸ್ಕೃತಿಕ ಆಗುಹೋಗುಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುವುದು ಆವಶ್ಯಕ. ಪಾಠಪ್ರವಚನ, ಉನ್ನತ ವ್ಯಾಸಂಗ ಮತ್ತು ಸಂಶೋಧನೆಗಳಿಗೆ ಮಾತ್ರ ವಿಶ್ವವಿದ್ಯಾಲಯಗಳ ಕಾರ್ಯವ್ಯಾಪ್ತಿ ಸೀಮಿತವಾಗಿರಬಾರದು. ಸಾಮಾನ್ಯ ಜನತೆಯಲ್ಲಿ ಅರಿವಿನ ಸಿರಿಯನ್ನು ಹಂಚುವ, ಹೊಣೆ ಹೊತ್ತು ವಿಶ್ವವಿದ್ಯಾಲಯಗಳು ಜ್ಞಾನಪ್ರಸಾರ ಕೇಂದ್ರಗಳಾಗಿ ಮುನ್ನಡೆಯಬೇಕು.

ಬೆಂಗಳೂರು ವಿಶ್ವವಿದ್ಯಾಲಯವು ಕಳೆದ ಏಳೆಂಟು ವರ್ಷಗಳಿಂದ ನಗರದ ನಾನಾ ಸಂಘಸಂಸ್ಥೆಗಳಲ್ಲಿ, ಕಾರ್ಖಾನೆ ಕಾರ್ಮಿಕ ಕೂಟಗಳಲ್ಲಿ ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ ಪ್ರಚಾರೋಪನ್ಯಾಸಗಳನ್ನು ಏರ್ಪಡಿಸುತ್ತ ಬಂದಿದೆ. ಆಯಾ ವಿಷಯಗಳಲ್ಲಿ ಪರಿಣತರಾದವರು ಭಾಷಣಗಳನ್ನು ನೀಡಿ, ಅನಂತರ ಅವುಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಲು ನಮ್ಮೊಡನೆ ಸಹಕರಿಸುತ್ತಿರುವುದು ಸಂತಸದ ಸಂಗತಿ. ಅತ್ಯಧಿಕ ಸಂಖ್ಯೆಯಲ್ಲಿ ನಮ್ಮ ಜನತೆಯ ಕೈಸೇರಲೆಂದು ಈ ಕಿರುಹೊತ್ತಿಗೆಗಳನ್ನು ಸುಲಭ ಬೆಲೆಯಲ್ಲಿ ಪ್ರಕಟಿಸುತ್ತಿದ್ದೇವೆ. ಕನ್ನಡ ಸಾಹಿತ್ಯದ ವಿವಿಧ ಪ್ರಕಾರಗಳ ಶ್ರೀಮಂತಿಕೆಯನ್ನು ಹೆಚ್ಚಿಸಿ, ಜನಸಾಮಾನ್ಯರ ತಿಳಿವನ್ನು ಉತ್ತಮಗೊಳಿಸುವ ದಿಸೆಯಲ್ಲಿ

ಈ ಹೊತ್ತಿಗೆಗಳು ಸಹಕಾರಿಯಾಗಲೆಂದು ನಾನು ಮನಸಾರೆ ಹಾರೈಸುತ್ತೇನೆ.

ಈ ಉಪಯುಕ್ತ ಕೃತಿಯನ್ನು ಹೊರತರುವಲ್ಲಿ ವಿಶ್ವ-ವಿದ್ಯಾಲಯದ ಜೊತೆ ಸಹಕರಿಸಿದ ಶ್ರೀಮಾನ್ ಗಜೇಂದ್ರಗಡ ಶಾಮರಾಯ ಅವರಿಗೆ ವಿಶ್ವವಿದ್ಯಾಲಯದ ಪರವಾಗಿ ನಮ್ಮ ವಂದನೆಗಳು.

ಎಂ. ಎನ್. ವಿಶ್ವನಾಥಯ್ಯ
ಉಪಕುಲಪತಿ

# ಅರಿಕೆ

ತಮ್ಮ ಮಕ್ಕಳ ಬಗ್ಗೆ ಮಕ್ಕಳ ಹಿತೈಷಿಗಳು, ತಂದೆತಾಯಿಗಳು ಸಮರ್ಪಕವಾಗಿ ತಿಳಿದುಕೊಳ್ಳುವುದು ಅಗತ್ಯವಾಗಿದೆ.

ತಮ್ಮ ಮಕ್ಕಳು ಕೇವಲ ತಮ್ಮ 'ಸೊತ್ತು' ಆಗಿಲ್ಲ. ಅವರು ತಾತ್ಕಾಲಿಕ ರಕ್ಷಣೆಗಾಗಿ ತಮಗೆ ಒಪ್ಪಿಸಿದ ಒಂದು ಅನರ್ಘ ಚೈತನ್ಯಮೂರ್ತಿ. ಮಕ್ಕಳು ರಾಷ್ಟ್ರದ ಮಹಾನ್ ಸಂಪತ್ತು. ಮಕ್ಕಳ ಸರಿಯಾದ ಪೋಷಣೆ, ಜೋಪಾಸನೆ ತಮಗೆ ವಹಿಸಿಕೊಟ್ಟ ಮಹತ್ತರವಾದ ಹೊಣೆ. ಈ ಕಾರ್ಯದಲ್ಲಿ ತಮ್ಮಿಂದ ಘಟಿಸುವ ಚಿಕ್ಕದೊಡ್ಡ ಪ್ರಮಾದಗಳಿಂದ ಮಗುವಿಗೆ, ತಮಗೆ ಮಾತ್ರ, ಕೇಡಲ್ಲ; ರಾಷ್ಟ್ರಕ್ಕೂ ಅದರಿಂದ ಅಪಾರವಾದ ಹಾನಿ.

ಈ ಹಾನಿಯನ್ನು ತಪ್ಪಿಸಲು ಮಕ್ಕಳ ಸ್ವರೂಪ ಹಾಗೂ ಸ್ಥಾನಮಾನಗಳ ಬಗ್ಗೆ ಸಂಮಂಜಸವಾದ ತಿಳುವಳಿಕೆಯನ್ನು ತಂದೆತಾಯಿಗಳಿಗೆ, ಮಕ್ಕಳ ಹಿತೈಷಿಗಳಿಗೆ, ಮಾಡಿಕೊಡಲು ಈ ಚಿಕ್ಕ ಪುಸ್ತಕದಲ್ಲಿ ಪ್ರಾಮಾಣಿಕ ಪ್ರಯತ್ನ ಮಾಡಿದೆ. ಇದನ್ನು ಓದಿ ಅವರು ಹೆಚ್ಚು ವಿಚಾರಶೀಲರಾದರೆ, ಮಕ್ಕಳ ಬಗ್ಗೆ ಹೆಚ್ಚು ಆಸ್ಥೆಯನ್ನು ವಹಿಸುವಂತಾದರೆ ನನ್ನ ಈ ಪ್ರಯತ್ನವು ಸಫಲವಾದಂತಾಯಿತು.

ಈ ಚಿಕ್ಕ ಪುಸ್ತಕವನ್ನು ಬರೆಯಲು ನನಗೆ ಪ್ರೇರಣೆ ಪ್ರೋತ್ಸಾಹವನ್ನಿತ್ತ, ಮಾನ್ಯ ಶ್ರೀಮಾನ್ ಕೆ. ಸಿ. ಶಿವಪ್ಪನವರಿಗೆ ನನ್ನ ಕೃತಜ್ಞತೆಯ ವಂದನೆಗಳು. ಸಂದರ್ಭಗ್ರಂಥಗಳ

ನ್ನೊದಗಿಸಿದ ಸ್ಟೇಟ್ ಲೈಬ್ರರಿಯ ಅಧಿಕಾರಿಗಳಾದ ಡಾ॥ ವ್ಹಿ. ಜಿ. ಗೋಕರ್ಣರವರಿಗೆ ನನ್ನ ಕೃತಜ್ಞತೆಗಳನ್ನು ಅರ್ಪಿಸುವೆ.

ಬರೆಯುವಾಗ್ಗೆ ನನ್ನ ದಣಿವು ಬೇಜಾರುಗಳನ್ನು ತನ್ನ ನಗೆ–ಆಟಗಳಿಂದ ನಿವಾರಿಸಿದ ಚಿ॥ ಬಂಡೂಗೆ ಆಶೀರ್ವಾದಗಳು.

**ಗಜೇಂದ್ರಗಡ ಶಾಮರಾಯ**

# ಮಕ್ಕಳ ಅಭ್ಯುದಯ—ರಾಷ್ಟ್ರದ ಸಂಪತ್ತು

## 1. ಸಂತಾನದ ಅಭಿಲಾಷೆ

ಆಹಾರಪ್ರಾಪ್ತಿ, ಆತ್ಮರಕ್ಷಣೆ, ಸ್ವವಂಶಾಭಿವೃದ್ಧಿ–ಇವು ಸಕಲ ಜೀವಿಗಳಿಗೂ ಸಮಾನವಾಗಿರುವ ಸಹಜ ಪ್ರವೃತ್ತಿಗಳು, ಸಜೀವಿ, ಸಚೇತನಗಳೆಂದು ವಿಜ್ಞಾನವು ಇಂದು ಸಪ್ರಯೋಗ ವಾಗಿ ತೋರಿಸಿಕೊಟ್ಟಿರುವ ಸಸ್ಯವರ್ಗಕ್ಕೂ, ಅವುಗಳ ಕಾರ್ಯಕ್ಕೆ ಇವೇ ಮೂರು ನೈಸರ್ಗಿಕ ಪ್ರವೃತ್ತಿಗಳು ಕಾರಣ ಗಳಾಗಿರುವವು. ಎಲೆ ಬೇರುಗಳನ್ನು ಸಾಧನವಾಗಿ ಮಾಡಿ ಕೊಂಡು ಭೂಮಿ, ಹವೆ, ನೀರು ಪ್ರಕಾಶಗಳಿಂದ ಸುಲಭವಾಗಿ ಸಸ್ಯಗಳು ತಮ್ಮ ತಮ್ಮ ಆಹಾರವನ್ನು ಪಡೆದುಕೊಳ್ಳುವವು. ಕೀಟಕಾಹಾರಿಗಳಾದ ಕೆಲವು ಸಸ್ಯಗಳು ಒಳ್ಳೇ ಕುಶಲತೆಯಿಂದ ಕೀಟಕಗಳನ್ನು ಕೈವಶ ಮಾಡಿಕೊಳ್ಳುವವು—ಸಜಾತಿಯ ಅಭಿ ವೃದ್ಧಿಗಾಗಿ ಸಸ್ಯಗಳು ಯೋಜಿಸುವ ಹಂಚಿಕೆಗಳಂ ಬೆರಗು ಗೊಳಿಸುವಂತಿವೆ.

ಹಸಿವೆ, ನೀರಡಿಕೆಗಳಂತೆಯೆ ಸಂತಾನಾಭಿಲಾಷೆಯೂ ಪಶು ಪಕ್ಷಿಗಳಿಗೆ ಒಂದು ಶುದ್ಧವಾದ ನೈಸರ್ಗಿಕ ಪ್ರವೃತ್ತಿಯಾಗಿದೆ, ನೀರು ಕುಡಿದು ನೀರಡಿಕೆಯನ್ನು ಹಿಂಗಿಸುವಂತೆ. ಅದಾದರೂ ಸಮುಚಿತವಾದ ಋತುಕಾಲದಲ್ಲಿ ಮಾತ್ರ. ಅನಂತರ ಮುಂದಿನ ಋತುಕಾಲದವರೆಗೆ ಈ ವಿಕಾರವೇ ಅವುಗಳಿಗೆ ಉಂಟಾಗುವುದಿಲ್ಲ. 'ಪ್ರಜಾಯೈಗೃಹಮೇಧಿನಾಂ' ಎಂದು ರಘುವಂಶದ ರಾಜರ

ಬಗ್ಗೆ ಕಾಳಿದಾಸನು ಹೇಳಿದ ಮಾತು ಇಂದಿನ ಕಾಲದಲ್ಲಿ ಪಶು ಪಕ್ಷಿಗಳಿಗೆ ಮಾತ್ರ ಹೆಚ್ಚಾಗಿ ಅನ್ವಯಿಸುವಂತೆ ತೋರುತ್ತಿದೆ.

ಚೇತನದ ಶ್ರೇಣಿಯಲ್ಲಿ ಮೇಲೆ ಮೇಲೆ ಹೋದಂತೆ ಶಿಶುವಿನ ಅಸಾಹಯತೆ, ಅವಲಂಬತೆಗಳೂ ಹೆಚ್ಚುವವು; ಅವುಗಳ ಅವಧಿಯೂ ಅಧಿಕವಾಗುವದು. ತಿಗಣಿಯ ಮರಿಯು ತಾಯಿಯ ಕೋಶದಿಂದ ಹೊರಬಿದ್ದ ಕೂಡಲೇ ಸ್ವಾವಲಂಬಿ. ರೆಕ್ಕೆಬಲಿತ ದಿನವೆ ಮರಿಪಕ್ಷಿ ತಾಯಿಪಕ್ಷಿಯನ್ನು ತ್ಯಜಿಸುವದು. ಪಶುಗಳ ಮರಿಗಳೂ ಹೀಗೆಯೆ. ಚೇತನ ಶ್ರೇಣಿಯ ಕೊನೆಯ ಸೋಪಾನದಲ್ಲಿ ನಿಲ್ಲುವ ಮಾನವ ಶಿಶುವಿನ ಸ್ಥಿತಿ-ಗತಿಯು ಇದಕ್ಕೆ ವಿಭಿನ್ನವಾಗಿರುವದು. ತನ್ನ ಕಾಲ ಮೇಲೆ ತಾನು ನಿಲ್ಲುವಂತಾಗು ವವರೆಗೆ ಮಾನವ ಶಿಶುವಿಗೆ ದೀರ್ಘಕಾಲದ ಜೋಪಾಸನೆ ಆರೈಕೆಗಳು ಅಗತ್ಯವೆನಿಸುವವು. ಆದರೆ ಸಂತಾನದ ಬಯಕೆ ಹಾಗೂ ಜೋಪಾಸನೆಯ ಹೊಣೆಗಳೆಂಬುವು ಪಶುಪಕ್ಷಿಗಳಿಗೂ, ಮಾನವನಿಗೂ ಸಮಾನವಾದವು, ಸದೃಶವಾದವು; ಈ ಮೂರು ಬೇಡಿಕೆಗಳ ಸಂತುಷ್ಟಿಗಾಗಿ ಮಾನವನು ಕಾಲಕಾಲಕ್ಕೆ ಅನುಗುಣ ವಾಗಿ ಬೇರೆಬೇರೆ ವಸ್ತುಗಳನ್ನು ಉಪಯೋಗಿಸಿಕೊಂಡಿರುವನು, ಬೇರೆಬೇರೆ ಸಾಧನಗಳನ್ನು ಬಳಸಿಕೊಂಡಿರುವನು. ಹೀಗಿದ್ದರೂ ಈ ಮೂರು ನೈಸರ್ಗಿಕ ಪ್ರವೃತ್ತಿಗಳು ಸ್ಥಿರವಾದವು, ಸರ್ವ ಕಾಲದಲ್ಲಿಯೂ ಸ್ವರೂಪತಃ ಶಾಶ್ವತವಾದವುಗಳು. ಬಹು ಮುಖವಾದ ಮಾನವ ಸಂಸ್ಕೃತಿಯ ವಿಕಾಸಕ್ಕೆ ಇವೇ ಮೂರು ನೈಸರ್ಗಿಕ ಒತ್ತಾಯಗಳೇ ಮುಖ್ಯಕಾರಣಗಳೆಂತಲೂ ಹೇಳು ವುದುಂಟು. ಈ ಮೂರು ಪ್ರವೃತ್ತಿಗಳ ಪರಿತುಷ್ಟಿಗಾಗಿ ಪ್ರತಿಯೊಂದು ಜೀವಿಯೂ ಕೈಕೊಳ್ಳುವ ಚಟುವಟಿಕೆಗಳೆಲ್ಲ 'ಜೀವನದ ಹೋರಾಟ','ಜೀವನದ ಸಂಗ್ರಾಮ'. ಈ ಜೀವನದ

ಹೋರಾಟವೆ ಮಾನವನು ನಿರ್ಮಿಸಿರುವ ಕಲೆಗಳಿಗೆ, ಸಾಹಿತ್ಯಕ್ಕೆ ಉನ್ನತೋನ್ನತವಾಗಿ ವಿಶಾಲಗೊಳ್ಳುತ್ತಿರುವ ನಮ್ಮ ಜ್ಞಾನ-ಕ್ಷೇತ್ರಕ್ಕೆ ಅದೃಶ್ಯವಾದ ಪ್ರೇರಕಶಕ್ತಿಯಾಗಿರುವದೆಂದು ತತ್ವಜ್ಞರು ಹೇಳುವುದುಂಟು.

ಸಂತಾನದ ಅಭಿಲಾಷೆ, ಮಗುವಿಗಾಗಿ ಹಂಬಲ, ಪ್ರಬಲ ವಾದ ಸಹಜ ಪ್ರವೃತ್ತಿಯಾಗಿದೆ, ಮಾನವರಲ್ಲಿ ದುರ್ದಮ್ಯವಾದ ಹೃದಯದ ಆಕಾಂಕ್ಷೆಯಾಗಿದೆ. ಸಂತಾನದ ಬಯಕೆ ಸ್ತ್ರೀಯಲ್ಲಿ ಹೆಚ್ಚು ತೀಕ್ಷ್ಣವೆಂದು ತೋರಿಬಂದರೂ, ಪುರುಷರ ಚಿತ್ತವನ್ನೂ ಅದು ಕದಡಿಬಿಡುವರು. ಪುರುಷರಿಗೂ ತಳಮಳವನ್ನುಂಟು ಮಾಡುವದು.

## 2. ಗಂಡು ಹೆಣ್ಣೆಂಬ ಪಕ್ಷಪಾತ

ಪಶುಪಕ್ಷಿ ಮುಂತಾದ ತಿರ್ಯಗ್ ಜೀವಿಗಳಿಗೆ ಸಂತಾನದ ಹಂಬಲ ಕೇವಲ ನೈಸರ್ಗಿಕ ಪ್ರಚೋದನೆ. ಜೀವಿಗಳ ಶ್ರೇಣಿ ಯಲ್ಲಿ ಉನ್ನತಸ್ಥಾನವನ್ನಲಂಕರಿಸುವ ಮಾನವನಿಗೆ ಸಂತಾನದ ಹಂಬಲ ಕೇವಲ ನೈಸರ್ಗಿಕ ಪ್ರಚೋದನೆಯಾಗಿಲ್ಲ. ನಿಸರ್ಗದ ಪ್ರಚೋದನೆಯೊಂದಿಗೆ, ಒಂದು ಬಗೆಯ ಆಧ್ಯಾತ್ಮಿಕ ಪ್ರಾರ್ಥ ನೆಯೂ, ಲೌಕಿಕ ಆಕಾಂಕ್ಷೆಯೂ ಅದರಲ್ಲಿ ಬೆರೆತುಕೊಂಡಿವೆ, 'ಸ್ವರ್ಗದ ಬೀಗದ್ಕೈ, ಮಗುವಿನಲ್ಲಿ' ಗಂಡುಮಗು ಸ್ವರ್ಗಕ್ಕೆ ದಾರಿ ಮಾಡಿಕೊಡುವವನು, 'ಪುನ್ನಾಮ'ವೆಂಬ ನರಕದಿಂದ ರಕ್ಷಿಸುವವನೇ ಪುತ್ರನು. ಈ ಅಧ್ಯಾತ್ಮಿಕ ಪ್ರಾರ್ಥನೆ ಹಾಗೂ ಮುಪ್ಪಿನಲ್ಲಿ ಮಗನು ತಮಗೆ ಊರುಗೋಲಾಗಬೇಕೆಂಬ ಅಪೇಕ್ಷೆ ಸಂತಾನಪ್ರಾಪ್ತಿಯು ನೈಸರ್ಗಿಕ ಪ್ರಚೋದನೆಗೆ ಪುಷ್ಟಿಯನ್ನು ಕೊಡುತ್ತಿವೆ, ಅದನ್ನು ಉದಾತ್ತೀಕರಿಸುತ್ತವೆ.

ಹೆಣ್ಣುಮಗುವನ್ನು ಹೀಗಳೆದು, ಗಂಡುಮಗುವಿಗೆ ಪ್ರಾಧಾನ್ಯತೆ ಕೊಡುವದನ್ನು ತಿಳಿದವರು ನಿಷೇಧಿಸುವರು. 'ಪೆಣ್ಣು ಪೆಣ್ಣೆಂದು' ಹಳಿಯುವವರು 'ಕಣ್ಣುಕಾಣದ ಗಾವಿಲರು', 'ಒಳಗುವರನಿಗಿತ್ತ ಕನ್ಯೆ ಕುಲಕೋಟಿಯನುದ್ಧರಿಪಳು'–ಎಂದು ಸಂಚಿಯ ಹೊನ್ನಮ್ಮನು ಹೆಣ್ಣನ್ನು ಹೀಯಾಳಿಸುವವರಿಗೆ ಎಚ್ಚರಿಕೆಯನ್ನು ನೀಡಿರುವಳು. 'ಪುತ್ರಾತ್ ಶತಗುಣಂ ಪುತ್ರೀಯದಿ ಪಾತ್ರೇಪ್ರದೀಯತೆ' ಎಂದು ಒಂದು ಸಂದರ್ಭದಲ್ಲಿ ಮಹಾಭಾರತಕಾರರು ಸ್ತ್ರೀಯ ಸ್ಥಾನಮಾನವನ್ನು ಎತ್ತಿ ಹಿಡಿದಿರುವರು. 'ಯತ್ರನಾರ್ಯಸ್ತು ಪೂಜ್ಯಂತೆ, ರಮಂತೆ ತತ್ರ ದೇವತಾಃ'–ಎಂದು ಹೆಣ್ಣುಮಕ್ಕಳಿಗೆ ಸಲ್ಲಬೇಕಾದ ಗೌರವವನ್ನೂ ಅವರು ಗುರುತಿಸಿರುವರು. 'ನಮಾತುಃ ಪರಮಂದೈವತಮ್', 'ಜನನೀ ಜನ್ಮಭೂಮಿಶ್ಚ ಸ್ವರ್ಗಾದಪಿ ಗರೀಯಸಿ', 'ಮಾತೃದೇವೋಭವ'–ಎಂಬ ಋಷಿವಾಕ್ಯಗಳನ್ನು ಇಂದಿಗೂ ಸಾಮಾನ್ಯ ಜನತೆಯ ಕಿವಿಗೆ ಮುಟ್ಟಿಸಬೇಕಾಗಿದೆ; ಹೃದಯಸ್ಪರ್ಶಿಯಾಗಿ ಮಾಡಬೇಕಾಗಿದೆ. ಉಪನಿಷತ್ಕಾಲದ ಗಾರ್ಗೇಯಿ ಮುಂತಾದ ಬ್ರಹ್ಮವಾದಿನಿಗಳ ದಿವ್ಯಚರಿತ್ರೆಯನ್ನು ಶ್ರೀಸಾಮಾನ್ಯರ ಮನಸ್ಸಿನಲ್ಲಿ ಮೂಡಿಸಬೇಕಾಗಿದೆ.

ಹೆಣ್ಣುಮಕ್ಕಳ ಬಗ್ಗೆ ಸಾಮಾನ್ಯ ಜನತೆಯಲ್ಲಿ, ವಿಶೇಷತಃ ಶಿಕ್ಷಣದ ಪ್ರಯೋಜನವನ್ನು ಪಡೆಯದವರಲ್ಲಿ ಇಂದಿಗೂ ಕಂಡು ಬರುತ್ತಿರುವ ಹೀಯಾಳಿಕೆಯ ಮನೋವೃತ್ತಿಯು ಮಾಯವಾಗಬೇಕು. ಹೆಣ್ಣುಮಗುವನ್ನು ಶಾಲೆಗೆ ಏಕೆ ಕಳಿಸಬೇಕು? ಅವಳು ಕಲಿತಾದರೂ ಮುಂದೆ ಏನು ಮಾಡಬೇಕಾಗಿದೆ?–ಎಂಬ ಅಸಡ್ಡೆಯ ಭಾವನೆಯೂ ಅಳಿದು ಹೋಗಬೇಕು. 'ಹೊಟ್ಟೆ

ಹೊರಕೊಳ್ಳುವುದಕ್ಕಾಗಿ (bread and butter education) ಶಿಕ್ಷಣ'ವೆಂಬ ಈ ಸಂಕುಚಿತ ಕಲ್ಪನೆಯು ತೊಲಗಬೇಕು.

ಜನತೆಯ ಸಾಮಾಜಿಕ ಹಾಗೂ ಆರ್ಥಿಕ ಸ್ಥಿತಿಗತಿಯು ಅವನತಿಗೆ ಇಳಿದಂದಿನಿಂದ ಹೆಣ್ಣುಮಕ್ಕಳ ಬಗ್ಗೆ ಈ ಜುಗುಪ್ಸೆಯು ಉಂಟಾಯಿತೆಂದೂ ಹೇಳಬಹುದು. ಆರ್ಥಿಕ ಕೊರತೆಯೇ ಅದಕ್ಕೆ ಮೂಲಕಾರಣ, ನೀತಿಯ ಸಮರ್ಥನೆಯಿಲ್ಲದ, ಶಾಸ್ತ್ರಗಳ ಎನಿತೂ ಆಧಾರವಿಲ್ಲದ, ಅನರ್ಥಕಾರಿಯಾದ ವರದಕ್ಷಿಣೆಯ ರೂಢಿಯು ಹೇಗೋ ಸಮಾಜದ ಒಂದು ಸ್ತರದಲ್ಲಿ ಬೆಳೆದು ಬಂದಿತು. ಬರಬರುತ್ತ ಸಮಾಜದ ಎಲ್ಲ ಸ್ತರಗಳಿಗೂ ಘಾತುಕವಾದ ಈ ರೂಢಿಯು ಕಾಲು ಚಾಚುತ್ತಿದೆ. 'ವರನ ಶಿಕ್ಷಣ ವೆಚ್ಚ'ವನ್ನೆಲ್ಲ ವರದಕ್ಷಿಣೆಯಿಂದ ಗಿಟ್ಟಿಸಬೇಕೆಂಬ ಗರ್ಹಣೀಯವಾದ ವಿಚಾರವು ವರನ ತಾಯಿತಂದೆಗಳನ್ನು ತಣಿಸುತ್ತದೆ. ಒಂದು ಮದುವೆಗಾಗಿ ಹೆಣ್ಣಿನ ತಂದೆತಾಯಿಗಳು ಮುಂದೆ ತಲೆಯೆತ್ತದಷ್ಟು ಹಾನಿಗೆ ಒಳಗಾಗುವರು. 'ಹೆಣ್ಣು ಹುಟ್ಟಿದರೆ ಹುಣ್ಣು ಹುಟ್ಟಿದಂತೆ'–ಎಂಬ ಮನೋವ್ಯಥೆಗೆ ಈ ಆರ್ಥಿಕ ಆತಂಕವೇ ಕಾರಣವಾಗಿದೆ. ಹೆಣ್ಣು ಮಗುವಿನ ಬಗ್ಗೆ ನೆಲೆಸಿದ ಹೀನಭಾವನೆಯೆ ಸ್ತ್ರೀ ಶಿಕ್ಷಣದ ಪ್ರಸಾರಕ್ಕೆ ದೀರ್ಘ ಕಾಲದವರೆಗೆ ಕಾಲ್ತೊಡಕಾಗಿತ್ತು. ಇಂದಿಗೂ ಈ ಮನೋಭೂಮಿಕೆಯು ಸ್ತ್ರೀಶಿಕ್ಷಣದ ಪ್ರಗತಿಯ ದಾರಿಯಲ್ಲಿ ಅಂಶತಃ ಆತಂಕವಾಗಿ ಉಳಿದಿದೆಯೆನ್ನಬಹುದು.

ಶಿಕ್ಷಣ ಕ್ಷೇತ್ರದಲ್ಲಿ ಪೂರ್ಣ ಪ್ರಗತಿಯನ್ನು ಸಾಧಿಸಿದ ಪಾಶ್ಚಾತ್ಯ ಜನಾಂಗಗಳಲ್ಲಿ ಹೆಣ್ಣು ಮಗುವಿನ ಬಗ್ಗೆ ತಾತ್ಸಾರದ ಭಾವನೆಯು ಕಿಂಚಿತ್ತಾದರೂ ಕಂಡುಬರುವುದಿಲ್ಲ. ಮಗು

ಗಂಡಾದರೆ ಅಲ್ಲಿಯ ಜನರ ಮನಸ್ಸು ಉಬ್ಬುವುದಿಲ್ಲ, ಹೆಣ್ಣಾದರೆ ಕುಗ್ಗುವುದಿಲ್ಲ. ಗಂಡು ಹೆಣ್ಣು ಮಕ್ಕಳಿಗೆ ತಾಯಿತಂದೆಗಳ ದೃಷ್ಟಿಯಲ್ಲಿ ಸರಿಸಮಾನತೆ. ಸಮಾಜದಲ್ಲಿ ಅಷ್ಟೇ ಸ್ಥಾನಮಾನ, ರಾಷ್ಟ್ರೀಯ ಸಂಪತ್ತಿನಲ್ಲಿ ಇಬ್ಬರಿಗೂ ಅಷ್ಟೇ ಬೆಲೆ.

ಗಂಡು ಹೆಣ್ಣು ಮಗುಗಳ ಬಗ್ಗೆ ಸಮಾನ ಸ್ಥಾನಮಾನದ ದೃಷ್ಟಿಯು ಇಂದು ನಮ್ಮ ಜನತೆಯಲ್ಲಿಯೂ ಮೂಡತೊಡಗಿದೆ. ಮದುವೆಯ ಕಾಲದಲ್ಲಿ ವರದಕ್ಷಿಣೆಯ ಮನಸ್ತಾಪವನ್ನು ಬಿಟ್ಟರೆ, ಹೆಣ್ಣಿನ ಬಗ್ಗೆ ಮುಂಚಿನ ತಿಳುವಳಿಕೆಯು ತಿಳಿಯಾಗತೊಡಗಿದೆ. ಗಂಡು ಹೆಣ್ಣು ಮಗುಗಳಿಬ್ಬರಿಗೂ ಶಿಕ್ಷಣವು ಸಾರ್ವತ್ರಿಕವಾಗಿದೆ; ಕಡ್ಡಾಯ ಸ್ವರೂಪದ್ದಾಗಿದೆ. ಸುಶಿಕ್ಷಿತರಾದ ತಂದೆ ತಾಯಿಗಳು ಶಿಕ್ಷಣದ ನೈಜ ಪ್ರಯೋಜನವನ್ನು ಅರಿತವರು. ಅಂತೆಯೆ ಸ್ತ್ರೀ ಶಿಕ್ಷಣವು ಇಂದು ವ್ಯಾಪಕವಾಗಿ, ನಿರಾತಂಕವಾಗಿ, ಪಸರಿಸಿದೆ, ಪಸರಿಸುತ್ತಿದೆ. ಹೆಣ್ಣು ಮಗುವಿಗೂ ತನ್ನ ದೈಹಿಕ, ಮಾನಸಿಕ, ಭಾವನಿಕ ಶಕ್ತಿಗಳನ್ನು ಪೂರ್ಣವಾಗಿ ವಿಕಸನಗೊಳಿಸಲು ಗಂಡು ಮಗುವಿಗೆ ಸರಿಸಮಾನವಾದ ಸದವಕಾಶ ದೊರೆತಿದೆ. ಸೌಕರ್ಯ ಗಳು ಲಭ್ಯವಾಗಿವೆ. ರಾಷ್ಟ್ರದ ಉತ್ಥಾನ ಹಾಗೂ ಉತ್ಕರ್ಷಗಳ ವಿವಿಧ ಕ್ಷೇತ್ರಗಳಲ್ಲಿ ಸ್ತ್ರೀಯು ಪುರುಷರಿಗೆ ಕಿಂಚಿತ್ತೂ ಊನ ವಾಗದ ಸೇವೆಯನ್ನು ಸಲ್ಲಿಸುತ್ತಿದ್ದಾಳೆ. 'ಮಕ್ಕಳು ರಾಷ್ಟ್ರದ ಅಮೂಲ್ಯ ಸಂಪತ್ತು' ಎಂಬ ಪದವಿಗೆ ನಮ್ಮ ದೇಶದ ಹೆಣ್ಣು ಮಗು ಕೂಡ ಇಂದು ಪಾತ್ರತೆಯನ್ನು ಪಡೆಯುತ್ತಿದೆ.

## 3. ಮಗುವಿನ 'ಸ್ವರೂಪ-ಸ್ವಭಾವ'

'ಮಗು ರಾಷ್ಟ್ರದ ಅಮೂಲ್ಯ ಸಂಪತ್ತು' ಎಂಬುದು ತಂದೆತಾಯಿಗಳಿಗೆ ಮನವರಿಕೆಯಾಗಬೇಕಾದರೆ, ಮಗುವಿನ

'ಸ್ವಭಾವ ಸ್ವರೂಪ'ಗಳ ಬಗ್ಗೆ ಅವರಿಗೆ ಸರಿಯಾದ ತಿಳುವಳಿಕೆ ಯಿರಬೇಕು. ಹುಟ್ಟಿದೊಡನೆ ಮಗು ಯಾವ ಬಂಡವಾಳವನ್ನು ತನ್ನೊಡನೆ ತರುವದು ? ಶಿಕ್ಷಣದ ಸಂಸ್ಕಾರದಿಂದ, ಪರಿಸರದ ಪ್ರಭಾವದಿಂದ ತನ್ನಲ್ಲಿಯ ಸುಪ್ತಶಕ್ತಿಗಳನ್ನು ಹೇಗೆ ಪ್ರಕಟ ಗೊಳಿಸುವದು ? ಆ ಶಕ್ತಿಗಳ ವಿಕಾಸಕ್ಕೆ ಯಾವ ಸಂಗತಿಗಳು ಪೋಷಕವಾಗಿವೆ ? ಯಾವುವು ಬಾಧಕವಾಗಬಹುದು ? ಮಗುವಿ ನಲ್ಲಿಯ ಸ್ವಾಭಾವಿಕ ಒಲವು ಶಕ್ತಿಗಳ ವಿಕಾಸದ ಕಾರ್ಯದಲ್ಲಿ ತಂದೆತಾಯಿಗಳ ಪಾತ್ರವೇನು ? ಹೊಣೆ ಎಷ್ಟು ? ಇವುಗಳ ಪರಿಚಯ ಮಾಡಿಕೊಳ್ಳುವ ಮೊದಲು, ಮಗುವಿನ ಸ್ವಭಾವ–ಸ್ವರೂಪಗಳ ಸರಿಯಾದ ತಿಳುವಳಿಕೆಯನ್ನು ತಂದೆತಾಯಿಗಳು ಮಕ್ಕಳ ಹಿತೈಷಿಗಳು ತಂದುಕೊಳ್ಳುವದು ತೀರ ಅವಶ್ಯವೆಂದು ಹೇಳಿದರೆ ತಪ್ಪಾಗದು.

ಮಗು ಜಡವಸ್ತುವಲ್ಲ, ಮಗು ಸಚೇತನವಾದುದು, ಸಜೀವವಾದುದು. ಜಡವಸ್ತುಗಳಾದ ಕಲ್ಲು ಕಟ್ಟಿಗೆ ಲೋಹ ಗಳಿಗೆ ಕುಶಲನಾದ ಶಿಲ್ಪಿಯು ತನಗೆ ಅಪೇಕ್ಷಿತವಾದ ರೂಪು–ಆಕಾರಗಳನ್ನು ಪ್ರತಿರೋಧ - ಪ್ರತಿಕ್ರಿಯೆಗಳ ಆತಂಕವಿಲ್ಲದೆ ಕೊಡಬಲ್ಲನು ; 'ಈ ರೂಪು ನನಗೆ ಬೇಕು, ಆ ಆಕಾರ ನನಗೆ ಬೇಡ' ಎಂಬ ಸ್ವಕೀಯವಾದ 'ಇಷ್ಟ'ವು ಅವುಗಳಿಗಿರುವದಿಲ್ಲ. ವಿಶಿಷ್ಟವಾದ ಒಲವು ಶಕ್ತಿಗಳನ್ನು ಜಡವಸ್ತು ಪಡೆದಿರುವದಿಲ್ಲ. 'ಹೀಗಿಯೆ ಆಗಬೇಕು'—ಎನ್ನುವ ಹಟ ಅವುಗಳಿಗಿರುವದಿಲ್ಲ. ಶಿಲ್ಪಿಯು ಮಾಡಿದಂತೆ ಆಗುವದು ಕಲ್ಲುಕಟ್ಟಿಗೆಗಳ ಸ್ವಭಾವ. ಅವುಗಳ ಸಂಸ್ಕಾರದಲ್ಲಿ ಕಲಾವಿದನ ಕಾರ್ಯವೇ ಪ್ರಧಾನ ವಾದುದು. ಆತನು ಕೊಟ್ಟದ್ದೇ ರೂಪ, ಬರೆದದ್ದೇ ಬಣ್ಣ. ಆದರೆ ಸಂಸ್ಕಾರರೂಪವಾದ ಶಿಕ್ಷಣಕ್ಕೆ ಒಳಪಡುವ ಹಾಗೂ

ಪಾತ್ರವಾಗಿರುವ ಮಗು ಚೈತನ್ಯಮೂರ್ತಿ. ಪ್ರತಿಯೊಂದು ಮಗುವಿಗೂ ಒಂದು ವಿಶಿಷ್ಟವಾದ ವ್ಯಕ್ತಿತ್ವವಿರುವುದು. ಒಬ್ಬೊಬ್ಬರಿಂದ ಭಿನ್ನವಾದ ಶಕ್ತಿಗಳಿರುವವು, ಬೇರೆಬೇರೆಯಾಗಿರುವ ಒಲವುಗಳಿರುವವು. ಈ ಸ್ವಾಭಾವಿಕ ಒಲವು ಶಕ್ತಿಗಳಿಗೆ ಅವುಗಳ ಹದ ಹಾಗೂ ಹವಣುಗಳನ್ನರಿತುಕೊಂಡು ಹಿತಕರವಾಗುವಂತೆ ಸಂಸ್ಕಾರ ಹಾಗೂ ತಿದ್ದುವಿಕೆಯ ವಿಧಾನಗಳನ್ನು ಒದಗಿಸಬೇಕಾಗುವದು. ಈ ಸಂಸ್ಕಾರದ ಕಾರ್ಯದಲ್ಲಿ ಮಗುವಿನ ಸಹಕಾರವೂ ಕೂಡ ಅಗತ್ಯವಾದುದು; ಪ್ರಧಾನವಾದುದು.

ಮಗುವಿಗೆ ದೊರೆಯುವ ಈ ಸಂಸ್ಕಾರವು ಹುಟ್ಟಿದಂದಿನಿಂದ ಸಾಯುವವರೆಗೂ ಬಹುಮುಖವಾಗಿ, ಬಹುವಿಧವಾಗಿ ಸಾಗುವುದು. ತಾಯಿಯ ಗರ್ಭದಲ್ಲಿಯೂ ಕೂಡ ಮಗು ಅಂತರಿಕವಾಗಿ ಅಪ್ರತ್ಯಕ್ಷವಾಗಿ ಸೂಕ್ಷ್ಮಸಂಸ್ಕಾರಗಳಿಗೆ ಒಳಗಾಗಿರುವದೆಂದೂ ಹೇಳುವರು. ಗರ್ಭಿಣಿಯ ಆಹಾರ–ಆಚಾರ ವಿಚಾರಗಳ, ಕೋಪ ತಾಪಗಳ ಸೂಕ್ಷ್ಮವಾದ ಪ್ರಭಾವವು ಅವಳ ಗರ್ಭದಲ್ಲಿ ಬೆಳೆಯುತ್ತಿರುವ ಶಿಶುವಿನ ಮೇಲೆ ಆಗುವುದೆಂದು ಶಾಸ್ತ್ರಜ್ಞರು ಹೇಳುವರು. ಉತ್ತರೆಯ ಗರ್ಭದಲ್ಲಿರುವಾಗಲೆ ಅಭಿಮನ್ಯುವಿಗೆ ಚಕ್ರವ್ಯೂಹ ಭೇದದ ಚತುರತೆ ದೊರೆತಿತಂತೆ, ಲವಕುಶರಿಗೆ ಜೃಂಭಿಕಾಸ್ತ್ರದ ಪರಿಚಯವುಂಟಾಯಿತಂತೆ. ದಾನವಕುಲದಲ್ಲಿ ಹುಟ್ಟಿದರೂ ಪ್ರಹ್ಲಾದನಿಗೆ ಅಚಲವಾದ ದೈವಭಕ್ತಿ ಉಂಟಾಯಿತಂತೆ. ಸಂತಾನ ವಿಜ್ಞಾನದ ಹೇಳಿಕೆಯನ್ನೇ ಈ ಪೌರಾಣಿಕ ಉದಾಹರಣೆಗಳು ವಿಶದಗೊಳಿಸುವವೆಂದು ಹೇಳಿದರೆ ತಪ್ಪಾಗದು. ಅಭಿವೃದ್ಧಿಯನ್ನು ಪಡೆದ ಕೆಲವು ಅಧುನಿಕ ರಾಷ್ಟ್ರಗಳಲ್ಲಿ ಗರ್ಭಿಣಿಯ ಆರೈಕೆ ಸಂಗೋಪನಗಳನ್ನು ಅಲ್ಲಿಯ ಸರಕಾರವೇ ವಹಿಸಿಕೊಳ್ಳುವುದು.

ತಾಯಿಯ ಗರ್ಭದಲ್ಲಿರುವ ಶಿಶು ತಮ್ಮ ರಾಷ್ಟ್ರದ ಭಾವೀನಾಗರಿಕನಾಗಲಿರುವನೆಂಬ ಭಾವನೆಯೇ ಇದಕ್ಕೆ ಹಿನ್ನೆಲೆಯಾಗಿರುವುದು. ಅದಕ್ಕಾಗಿ ಆ ಗರ್ಭಿಣಿಗೆ ಪೌಷ್ಟಿಕ ಆಹಾರ, ಉಚಿತವಾದ ವಿಹಾರ, ಅಗತ್ಯವಿರುವ ವಿರಾಮ–ವಿಶ್ರಾಂತಿಗಳನ್ನು ಒದಗಿಸಲು ಆ ರಾಷ್ಟ್ರಗಳು ಏರ್ಪಾಡು ಮಾಡುವವು. ಅವಳ ಗರ್ಭದಲ್ಲಿ ಅಂಕುರಿಸಿದ ಆ ಸಂತಾನಬೀಜವು ಸತ್ವಶಾಲಿಯಾದ ನಾಗರಿಕನಾಗಿ ಬೆಳೆಯಬೇಕೆಂಬುದೇ ಅದರ ಉದ್ದೇಶವಾಗಿದೆ. ಒಂದು ಮೂರ್ತಿಯು ತನ್ನ ಮನಸ್ಸಿನಲ್ಲಿ ಮೂಡಿದಂತೆ ತೃಪ್ತಿ ಆಗದಿದ್ದರೆ, ಶಿಲ್ಪಿಯು ಶಿಲೆಯನ್ನು ಬಿಟ್ಟುಕೊಟ್ಟು ಬೇರೊಂದು ಶಿಲೆಯಲ್ಲಿ ಅದನ್ನು ಕಟೆಯಬಹುದು. ವರ್ಣ ಶಿಲ್ಪಿಯು ಒಂದು ಪಟವನ್ನು ಚೆಲ್ಲಿಕೊಟ್ಟು ಬೇರೊಂದರಲ್ಲಿ ತನಗೆ ಇಷ್ಟವಾದುದನ್ನು ಚಿತ್ರಿಸಬಹುದು. ನಿರ್ಜೀವ ವಸ್ತುಗಳೊಡನೆ ವ್ಯವಹರಿಸುವ ಕಲಾವಿದ ಇಲ್ಲವೆ ಕಾರಾಗೀರರಿಂದ ಆಗುವ ತಪ್ಪುಗಳು ತೀರ ಕಡಿಮೆ ಹಾನಿಯನ್ನುಂಟುಮಾಡುವವು. ಆ ತಪ್ಪುಗಳನ್ನು ಸುಲಭವಾಗಿ ತಿದ್ದಿಕೊಳ್ಳಲು ಬರುವುದು. ಆದರೆ ಶಿಕ್ಷಕನ ಇಲ್ಲವೆ ತಾಯಿತಂದೆಗಳ ಪ್ರಮಾದದಿಂದ ಚೈತನ್ಯ ಮೂರ್ತಿಯಾದ ಮಗುವಿಗೆ ಶಾಶ್ವತವಾದ ಕೆಡುಕು ಉಂಟಾಗುವುದು. ಸಮಾಜದ ಘಟಕವಾದ ಒಂದು ಜೀವಿಯ ವ್ಯಕ್ತಿತ್ವವೆ ವಿಕೃತವಾಗುವುದು. ಇದರಿಂದ ರಾಷ್ಟ್ರದ ಸಜೀವ ಸಂಪತ್ತಿಗೆ ಒದಗುವ ನಷ್ಟವೂ ತುಂಬಬಾರದಂತಹದು. ಅಂತೆಯೇ ಬೆಳೆಯುವ ಮಗುವಿನ ಬಗ್ಗೆ ಅತೀವ ದಕ್ಷತೆ ಹಾಗೂ ಅವಧಾನಗಳು ತೀರ ಅಗತ್ಯವಾದವು.

ಮಗು ಚೈತನ್ಯ ಮೂರ್ತಿ, ನಿರ್ಜೀವವಾದ ಪಾತ್ರೆಯಂತೆ ತನ್ನಲ್ಲಿ ತುಂಬುವುದನ್ನು ತುಂಬಿದಂತೆಯೆ ತೆಗೆದುಕೊಳ್ಳಲಾರದು.

ಮಗುವಿಗೆ ಮೈ ಮಿದುಳಿರುವಂತೆ, 'ಮನಸ್ಸು' ಎಂಬು ದೊಂದಿದೆ. ಪ್ರತಿಯೊಂದು ಮಗುವಿಗೂ ತನ್ನದೇ ಆದ ವಿಶಿಷ್ಟವೆನ್ನಬಹುದಾದ ಆಸ್ಥೆ-ಆಕಾಂಕ್ಷೆಗಳಿವೆ. ಉದ್ವೇಗ-ಉಲ್ಲಾಸಗಳಿವೆ. ಮಗುವಿನ ಶಾರೀರಕ ಬೆಳವಣಿಗೆಯೊಡನೆ ವಯೋನುಗುಣವಾಗಿ ಆತನ ಮನಸ್ಸೂ ಹಾಗೂ ಅಂತರಂಗದ ಭಾವನೆಗಳೂ ಸರಾಗವಾಗಿ ವಿಕಾಸ ಹೊಂದುತ್ತಿರುವವು. ಮಗುವಿನ ಮೈಮನಗಳೆರಡೂ ಸತ್ವತಃ ಭಿನ್ನವಾಗಿಲ್ಲ. ಅವೆರಡೂ ಒಂದೇ ತಾಳ ನಿಯಮಗಳನ್ನನುಸರಿಸಿ ಬೆಳೆಯುವವು, ಮನಸ್ಸು ಹಾಗೂ ದೇಹಗಳ ಅನ್ಯೋನ್ಯತೆಯನ್ನು ಇಂದಿನ ಮಾನಸ ಶಾಸ್ತ್ರವು ಸಾಧಾರಣವಾಗಿ ಸಿದ್ಧ ಮಾಡಿಕೊಟ್ಟಿದೆ. ಅವೆರಡರಲ್ಲಿಯೂ ನಿತ್ಯವಾದ ಬಿಡಿಸಲಾರದ ಸಂಬಂಧವಿದೆ. 'ಒಳ್ಳೇ' ದೇಹದಲ್ಲಿ 'ಒಳ್ಳೇ ಮನಸ್ಸು' ಎಂಬ ಉಕ್ತಿಯೂ ಇದೇ ಸಂಗತಿಯನ್ನೇ ಸೂಚಿಸುವುದು. ಶರೀರದ ಇಂದ್ರಿಯಗಳು-ಮನಸ್ಸಿನ ನಿಯಂತ್ರಣಕ್ಕೆ ಅಧೀನವಾಗಿರುವಂತೆ, ಶರೀರದ ಸಹಕಾರವಿಲ್ಲದ ಮನಸ್ಸೂ ಅಸಹಾಯಕವಾಗಿ ಬಿಡುತ್ತದೆ. ಕೇವಲ ಶರೀರವು ಕುರುಡ, ಕೇವಲ ಮನಸ್ಸು ಹೆಳವ. ಕಥೆಯಲ್ಲಿ ಹೇಳುವಂತೆ-ಕುರುಡ ಹಾಗೂ ಹೆಳವರು ಒಬ್ಬರೊಬ್ಬರ ಸಹಕಾರದಿಂದಲೇ ನದಿಯನ್ನು ದಾಟಬೇಕು. ಶರೀರ ಮನಸ್ಸುಗಳು ಒಂದಾಗಿಯೆ ಜೀವನದ ವ್ಯವಹಾರವನ್ನು ನಡೆಸಬೇಕು. ಶರೀರದ ಬೆಳವಣಿಗೆಯೊಡನೆ, ಮಗುವಿಗೆ ಆತ್ಮಶಕ್ತಿಗಳೂ ಒಂದು ಕ್ರಮದಿಂದ ಅರಳುತ್ತ ಹೋಗುವವು. ಅಂತರಂಗ-ಬಹಿರಂಗಗಳ ಈ ಜೋಡು ಬೆಳವಣಿಗೆಯು ಅತ್ಯಂತ ಸೋಜಿಗವುಳ್ಳದ್ದಾಗಿದೆ. ಇವೆರಡರಲ್ಲಿ ಯಾವುದಾದರೂ ದುರ್ಬಲ, ಕ್ರಿಯಾಹೀನವಾದರೆ,

'ಇಜ್ಜೋಡು' ಸಂಸಾರದಂತೆ, ಆ ವ್ಯಕ್ತಿಯ ಜೀವನವೂ ವಿರಸ ವಾಗುವದು.

## 4. ಮಕ್ಕಳಲ್ಲಿಯ ವ್ಯತ್ಯಾಸಗಳು

'ಒಂದು ಮಗುವಿನಂತೆ ಮತ್ತೊಂದು ಮಗುವಿರುವದಿಲ್ಲ' ಮಕ್ಕಳನ್ನು ಸೂಕ್ಷ್ಮವಾಗಿ ನಿರೀಕ್ಷಿಸಿದರೆ, ಈ ಮಾತು ಸುಸ್ಪಷ್ಟ ವಾಗಿ ಗೋಚರವಾಗುವದು. ತಂದೆತಾಯಿಗಳು ತಮ್ಮ ಮಗು ವಿನ ಪೂರ್ಣ ಪರಿಚಯವನ್ನು ಸರಿಯಾಗಿ ಮಾಡಿಕೊಳ್ಳಬೇಕು. ಪ್ರತಿಯೊಂದು ಮಗುವಿಗೂ ತನ್ನದೇ ಆದ 'ಸ್ವ' ಭಾವವಿದೆ, ಹೊರಗೆ ಕಾಣುವ ದೇಹವಿರುವಂತೆ, ಆತನಿಗೆ ಮನಸ್ಸಿದೆ, ಮೆದು ಳಿದೆ, ಹೃದಯವಿದೆ, ಮಗು ಮಗುವಿನಲ್ಲಿ ನೆಲಸಿರುವ ಈ ವ್ಯತ್ಯಾಸವು ಬಹುಮುಖವಾಗಿದೆ. ಮಕ್ಕಳ ಮೈಕಟ್ಟಿನಲ್ಲಿ, ನಿಲುವಿಕೆಯಲ್ಲಿ ಮೈಬಣ್ಣದಲ್ಲಿ ಇರುವ ವ್ಯತ್ಯಾಸವು ತಾನಾಗಿಯೆ ಒಡೆದು ತೋರುವುದು. ಈ ಶಾರೀರಿಕ ವ್ಯತ್ಯಾಸಗಳು ಸ್ಥೂಲ ವಾದವುಗಳು. ಮಾನಸಿಕ, ಬೌದ್ಧಿಕ ಹಾಗೂ ಭಾವನಾತ್ಮಕ ವ್ಯತ್ಯಾಸಗಳು ಪ್ರತಿಯೊಬ್ಬ ಮಗುವಿನ ಸ್ವಭಾವದಲ್ಲಿ ಅಡಕ ವಾಗಿವೆ.

ಮಾನಸಿಕ ವ್ಯತ್ಯಾಸಗಳಲ್ಲಿ ಮೊಟ್ಟಮೊದಲು ತೋರಿ ಬರುವದು – ಸಹಜಪ್ರವೃತ್ತಿಗಳ ವಿಷಯದಲ್ಲಿ. ಮಕ್ಕಳಲ್ಲಿ ಕುತೂಹಲ ಪ್ರವೃತ್ತಿಯು ಪ್ರಬಲವಾಗಿರುತ್ತದೆ. ಮೈ ತುಂಬ ಕಣ್ಣುಗಳಿದ್ದಂತೆ, ಅವರಿಗೆ ಎಲ್ಲವೂ ಕಾಣುವುದು. 'ಏಕೆ ? ಹೇಗೆ ?' – ಎಂಬ ಪ್ರಶ್ನೆಗಳ ಸುರಿಮಳೆ ಹಾಕುತ್ತಾರೆ. ಕೆಲವು ಮಕ್ಕಳಲ್ಲಿ ಅದು ತೀರ ಕಡಿಮೆ. ಕಣ್ಣಿದ್ದೂ ಕುರುಡರಂತೆ ಸುತ್ತಲಿನ ವಸ್ತುಗಳನ್ನೂ ಘಟನೆಗಳನ್ನೂ ಅರಿತುಕೊಳ್ಳುವ

ಲವಲವಿಕೆಯೋ ಅವರಲ್ಲಿ ಕಾಣುವದಿಲ್ಲ, ತಮಗೆ ಉತ್ತರ ಹೇಳಲು ಬಾರದಿದ್ದರೆ, ತಂದೆತಾಯಿಗಳು ಮಕ್ಕಳ ಕುತೂಹಲ ವನ್ನು ಕುಗ್ಗಿಸಬಾರದು, ಬೆದರಿಕೆಯಿಂದ ಅವರನ್ನು ನಿರುತ್ಸಾಹ ಗೊಳಿಸಬಾರದು. ಅವರು ಕೇಳಿದ್ದಕ್ಕೆ ಏನಾದರೊಂದನ್ನು ಹೇಳಿ ಅಸತ್ಯದ ಅಡ್ಡದಾರಿಗೂ ಅವರನ್ನು ಎಳೆಯಬಾರದು.

ಊಹೆ, ಸ್ಮರಣ, ಕಲ್ಪನೆ ಮುಂತಾದ ಬೇರೆ ಮಾನಸಿಕ ಶಕ್ತಿಗಳಲ್ಲಿಯೂ ಚಿಕ್ಕಮಕ್ಕಳಲ್ಲಿ ಹೆಚ್ಚುಕಡಿಮೆ ಪ್ರಮಾಣವು ಕಂಡುಬರುತ್ತಿದೆ. ಕೆಲವು ಮಕ್ಕಳಲ್ಲಿ 'ಮುನ್ನೋಟ' ಹಾಗೂ 'ಗ್ರಾಹಕಶಕ್ತಿ'ಗಳು ಹೆಚ್ಚಿನವು. 'ಹೀಗಿದ್ದರೆ ಹೀಗಾಗಬಹುದು' ಎಂಬುದನ್ನು ಅವರು ಕೂಡಲೆ ತರ್ಕಿಸಿ ಬಿಡುತ್ತಾರೆ. ಕೆಲವು ಮಕ್ಕಳಲ್ಲಿ ಸ್ಮರಣ ಶಕ್ತಿಯು ಪ್ರಭಾವಶಾಲಿಯಾಗಿರುತ್ತದೆ. ಕಂಠಪಾಠ ಮಾಡುವುದು ಅವರಿಗೆ ನೀರುಕುಡಿದಂತೆ, 'ಏಕಪಾಠಿ' ಗಳೆಂದು ಅವರ ವಿಷಯದಲ್ಲಿ ಹೇಳುವುದುಂಟು. ಕೆಲವರಲ್ಲಿ ಕಲ್ಪನೆಯ ವೇಗ ಹೆಚ್ಚು. ಕಥೆ ಹೇಳುವಾಗ 'ಆ ಹುಡುಗನಿಗೆ ಹಣದ ಕೈಚೀಲ ಬೀದಿಯಲ್ಲಿ ಸಿಕ್ಕಿತು. ಆತನು ತುಂಬಾ ಪ್ರಾಮಾಣಿಕ. ಆ ಚೀಲದಲ್ಲಿ ಕಳೆದುಕೊಂಡವರ ವಿಳಾಸವಿತ್ತು. ಆತನು ಮುಂದೆ ಏನು ಮಾಡಿರಬಹುದು' – ಎಂಬ ಪ್ರಶ್ನೆಗೆ ಇಂಥ ಮಕ್ಕಳು ತಟ್ಟನೆ ಉತ್ತರ ಕೊಟ್ಟುಬಿಡುವರು. ಕೆಲವರು ಉಲ್ಲಾಸಿಗಳು, ಸದಾ ನಗುಮೋರೆ, ಕೆಲವರು ತುಂಬಾ ನಿರುತ್ಸಾಹಿಗಳು, ಸದಾ ಜೋಲು ಮೋರೆ. ಕೆಲವರ ಆಸ್ಥೆ – ಅವಧಾನಗಳು ಕೇಂದ್ರೀಕೃತವಾದವು. ಅವರು ತಿಳಿದುಕೊಳ್ಳುವ ವಿಷಯದ ವ್ಯಾಪ್ತಿ ಕಿರಿದು, ಆದರೆ ಆಳ ಹೆಚ್ಚು. ಕೆಲವರ ಆಸ್ಥೆ ಅವಧಾನಗಳು ವಿಕೇಂದ್ರೀಕೃತವಾದವು. ಅವರ ಜ್ಞಾನದ ಆಳವು ಕಡಿಮೆ. ಕೆಲವರು ಮುಂಗೋಪಿಗಳು. ಸಿಟ್ಟು ಅವರ

ಮೂಗಿನ ತುದಿಯ ಮೇಲೆ. ಕೆಲವರು ಅಂತರ್ಮುಖಿರು. ಯಾವುದೇ ವಸ್ತು ಇಲ್ಲವೇ ವಿಷಯವನ್ನು ಪೂರ್ವಾನುಭವದ ಬಣ್ಣದ ಗಾಜಿನೊಳಗಿಂದಲೇ ಇವರು ಕಾಣುವರು. ಕೆಲವರು 'ಬಹಿರ್ಮುಖಿರು'. ಅವರಲ್ಲಿ ವಾಸ್ತವಿಕತೆ ಹೆಚ್ಚು. ವಸ್ತು ಹಾಗೂ ವಿಷಯಗಳು ಅವರಿಗೆ ಇದ್ದಂತೆಯೆ ಕಾಣುವುವು. ಮಾನಸಿಕ ಒಲವುಗಳಲ್ಲಿ ವ್ಯತ್ಯಾಸವಿರುವಂತೆ ಸ್ಥಿರವಾಗಿ ಉಳಿಯುವ ಅವುಗಳ ಪ್ರಮಾಣವೂ ಹೆಚ್ಚುಕಡಿಮೆಯಾಗಿರುವುದು, ಮಕ್ಕಳಲ್ಲಿಯ ಈ ಸೂಕ್ಷ್ಮ ವ್ಯತ್ಯಾಸಗಳನ್ನು ಗುರುತಿಸುವುದು, ಅವುಗಳಿಗೆ ಅನುಗುಣವಾಗಿ ಜೋಪಾಸನೆಯ ವಿಧಾನಗಳನ್ನು ವ್ಯತ್ಯಾಸಗೊಳಿಸುವುದು-ತಂದೆತಾಯಿಗಳು ಅಗತ್ಯವಾಗಿ ಅರಿತುಕೊಳ್ಳಬೇಕಾದ, ಆಚರಿಸಬೇಕಾದ ಸಂಗತಿಯಾಗಿದೆ.

## 5. ಸಮಸ್ಯಾತ್ಮಕ ಮಕ್ಕಳು

ಕೆಲವೊಂದು ಮಕ್ಕಳಲ್ಲಿ ವಿಶಿಷ್ಟವಾದ ಮಾನಸಿಕ, ಭಾವನಿಕ ವ್ಯತ್ಯಾಸಗಳು ಎಳೆಯತನದಲ್ಲಿ ಕಂಡಬರುವುವು. ಅಂಥವರಿಗೆ 'ಸಮಸ್ಯಾತ್ಮಕ ಮಕ್ಕಳು' (Problem Children) ಎಂದು ಹೇಳುವದುಂಟು. ಇಂಥ ಮಕ್ಕಳ ವೃತ್ತಿವರ್ತನೆಗಳು ಅದೇ ವಯೋಮಾನದ ಸಾಮಾನ್ಯ ಮಕ್ಕಳಿಗಿಂತಲೂ ವಿಭಿನ್ನವಾಗಿರುವವು. ಕೆಲವರಲ್ಲಿ ತುಂಟತನ, ಕಾಲುಕೆದರಿ ಜಗಳ ತೆಗೆಯುವುದು, ದುರ್ಬಲರಾದ ಓರಿಗೆಯ ಗೆಳೆಯರನ್ನು, ಸಹಪಾಠಿಗಳನ್ನು ಕಾರಣವಿಲ್ಲದೆಯೆ ಅವರು ಪೀಡಿಸುವರು. ಈ ನಿರ್ದಯತೆ, ಅವರಲ್ಲಿ ಒಂದು ನೈಸರ್ಗಿಕವಾದ ದೋಷ. ಈ ಒಲವಿಗೆ ಹಿತಕರವಾದ ಹಾದಿಗಳನ್ನು ಹಾಕಿಕೊಟ್ಟಲ್ಲಿ ಈ ಅನಿಷ್ಟ ಪ್ರವೃತ್ತಿಯು ಅಳಿದು ಹೋಗುವದು. ಇನ್ನು ಕೆಲವು

ಮಕ್ಕಳಲ್ಲಿ ಚಂಚಲತೆ, ಅಸ್ಥಿರವಾದ ಮನಸ್ಸು ಯಾವ ಕಾರ್ಯ ವನ್ನೂ ಅವರು ಪೂರ್ತಿಗೊಳಿಸುವದಿಲ್ಲ. ಎಲ್ಲವೂ ಅರೆವಾಸಿ, ಅಂಥವರಿಗೆ 'ಇಂತಿಷ್ಟನ್ನು ಅಥವಾ ಇಂಥದೊಂದು ಕಾರ್ಯ ವನ್ನು ಪೂರ್ತಿಗೊಳಿಸಿಯೆ ಊಟ ಮಾಡಬೇಕು, ಆಟವಾಡಲು ಹೋಗಬೇಕು' — ಎಂಬ ನಿಶ್ಚಿತ ಕಾರ್ಯಕ್ರಮವನ್ನು ಹಾಕಿ ಕೊಡಬೇಕು. ಕೆಲವು ಬಾಲಕರು ಚಿಕ್ಕಪುಟ್ಟ ಕಳವು ಮಾಡುವರು. ಅದಕ್ಕೆ ಒಂದು ಕಾರಣವೆಂದರೆ ಓರಿಗೆಯ ಗೆಳೆಯರಿಗೆ ಅವರವರ ಮನೆಯಲ್ಲಿ ಸುಲಭವಾಗಿ ದೊರೆಯುವ ತಿನಿಸು–ಆಟದ ವಸ್ತುಗಳು. ಮಕ್ಕಳ ಮನೋಭೂಮಿಕೆಯನ್ನರಿ ಯದ ಮಕ್ಕಳ ತಂದೆತಾಯಿಗಳು ಶಿಸ್ತಿನ ನೆಪದಲ್ಲಿ ತಮ್ಮ ಮಕ್ಕಳ ಅಲ್ಪವೆಚ್ಚದ ಬೇಡಿಕೆಗಳನ್ನೂ ಪೂರೈಸುವದಿಲ್ಲ. ಅವರಿಂದ ಅತೃಪ್ತವಾದ ಅವರ ಆಕಾಂಕ್ಷೆ ಮೊದಲು ಚಿಕ್ಕಪುಟ್ಟ ಕಳವುಗಳ ದಾರಿಗೆ ಈ ಮಕ್ಕಳನ್ನು ಎಳಸುವದು. ಕೆಲವು ಮಕ್ಕಳು ಸುಳ್ಳು ಹೇಳುವದುಂಟು. ಭೀತಿಯೇ ಅದಕ್ಕೆ ಕಾರಣ. ಶಿಕ್ಷೆಯಿಂದ ಪಾರಾಗಲು ಅವರು ಸುಳ್ಳು ಹೇಳುವದುಂಟು. ಮಕ್ಕಳ ಭಯದ ಕಾರಣವನ್ನು ಶೋಧಿಸಿ, ಅದನ್ನು ಕುಶಲತೆ ಯಿಂದ ನಿವಾರಿಸಿ, ಸತ್ಯವನ್ನೇ ನುಡಿಯಲು ತಂದೆತಾಯಿಗಳು ಅಂಥ ಮಕ್ಕಳಿಗೆ ಉತ್ತೇಜನ ಕೊಡಬೇಕು. ಕೆಲವು ಮಕ್ಕಳಲ್ಲಿ ಮುಖಹೀನತೆ (ಮುಖೀನತೆ Shyness) ಕಂಡು ಬರುವದು. ಇದೊಂದು ಮಾನಸಿಕ ದೌರ್ಬಲ್ಯ. ಉತ್ತೇಜನ ಪ್ರಶಂಸೆಗಳಿಂದ ಅವರಲ್ಲಿ ಭರವಸೆ — ಆತ್ಮವಿಶ್ವಾಸಗಳನ್ನು ಹುಟ್ಟಿಸಬೇಕು. ಉಗ್ಗುವದೂ (Stammering) ಮಾನಸಿಕ ದೌರ್ಬಲ್ಯ, ಅದಕ್ಕೆ ಮಾನಸಿಕ ಚಿಕಿತ್ಸೆ—ತಜ್ಞರಿಂದ ಮಾಡಿಸಬಹುದು. ಸಾವಧಾನ ವಾಗಿ ಮಾತನಾಡುವ ರೂಢಿಯನ್ನು ಹಾಕಿಕೊಡಬೇಕು.

'ನನ್ನ ಮಗ ಉಳಿದ ಮಕ್ಕಳಂತೆ ಬುದ್ಧಿವಂತ, ವ್ಯವಸ್ಥಿತ ನಾಗುವದಿಲ್ಲವೆ ? ... ನಂತೆ ನನ್ನ ಮಗನೂ ಏಕೆ ಮುಂದೆ ಬರಬಾರದು ? ಅವನೇಕೆ ಹಿಂದು ಬೀಳುವನು ?' ಈ ಚಿಂತೆ ಅನೇಕ ತಾಯಿತಂದೆಗಳ ಮನಸ್ಸನ್ನು ಕೊರೆಯುತ್ತಿದೆ. ತಾವಾಗಿಯೆ ಆಗಲಿ, ತಜ್ಞರ ನೆರವಿನಿಂದಾಗಲಿ, ತಮ್ಮ ಮಕ್ಕಳ ಹಿಂದುಳುವಿಕೆಗೆ ನಿಮಿತ್ತಗಳಾಗಿರುವ ಅವರಲ್ಲಿಯ ದೋಷ ದೌರ್ಬಲ್ಯಗಳನ್ನು ಅವರು ಕಂಡುಹಿಡಿಯಬೇಕು. ಎಳೆಯುತನ ದಲ್ಲಿಯೆ ಸಮರ್ಪಕವಾದ ಉಪಾಯುಗಳನ್ನು ತಿಳಿದುಕೊಂಡು ಅವುಗಳನ್ನು ನಿವಾರಿಸಬೇಕು. ಹೀಗೆ ಮಾಡದೇ ಹೋದರೆ ತಮ್ಮ ಮನೆತನಕ್ಕೂ ರಾಷ್ಟ್ರದ ಮಾನವ ಸಂಪತ್ತಿಗೂ ಹಾನಿ ತಟ್ಟುವದೆಂಬ ಪ್ರಜ್ಞೆ ಅವರಲ್ಲಿ ಮೂಡಿರಬೇಕು.

ದುರ್ದೈವದಿಂದ ಇಲ್ಲವೇ ದುರ್ಲಕ್ಷತತೆಯಿಂದ ಬಳಲುವ ಇಂಥ ಮಕ್ಕಳಿಗಾಗಿ ಪಾಶ್ಚಾತ್ಯದೇಶಗಳಲ್ಲಿ ಪ್ರತ್ಯೇಕವಾದ ಶಿಕ್ಷಣ ಸಂಸ್ಥೆಗಳಿರುವವು. ಮನೋವಿಜ್ಞಾನದಲ್ಲಿ ಪರಿಣತರಾದ ಮೇಲ್ವಿಚಾರಕರಿರುವರು. ಇಂದ್ರಿಯುಗಳಿಗೆ ಸಮುಚಿತವಾದ ಸಂಸ್ಕಾರವನ್ನು ಕೊಡುವ ಉಪಕರಣಗಳಿರುವವು. ಸಾಮಾಜಿಕ ಭಾವಗಳ ಪೋಷಣಕ್ಕೆ ಹಿತಕರವಾದ ಪರಿಸರವನ್ನು ಅಲ್ಲಿ ಕಲ್ಪಿಸುವರು. ನಮ್ಮ ದೇಶದ ಸದೋಷ ಮಕ್ಕಳಿಗೂ ಈ ಬಗೆಯ ಸದವಕಾಶಗಳು ದೊರೆಯುವದು ಅಗತ್ಯ. ರಾಷ್ಟ್ರದ ಪ್ರತಿಯೊಂದು ಮಗು ನಿರ್ದೋಷವಾಗಿ ಬೆಳೆಯಬೇಕು. ತನ್ನ ತನ್ನ ಶಕ್ತಿಗಳ ವಿಕಾಸದಲ್ಲಿ ವಿಹಿತವಾದ ಉನ್ನತಿಯನ್ನು ಪಡೆಯ ಬೇಕು. ಮಕ್ಕಳು ಅಮೂಲ್ಯವಾದ ರಾಷ್ಟ್ರೀಯ ಸಂಪತ್ತು, ಎಂಬ ಅರಿವು ಎಲ್ಲರ ಮನಸ್ಸಿನಲ್ಲಿಯೂ ಜಾಗೃತವಾಗಬೇಕು.

## 6. ಮಗುವಿನ ಸ್ಥಾನ-ಮಾನ : ಹಿಂದಿನದು-ಇಂದಿನದು

ಹಿಂದಿನ ಕಲ್ಪನೆಯಲ್ಲಿ 'ಮಗು ಒಂದು ಕಿಡಿಗೇಡಿಯಾದ ಪ್ರಾಣಿ. ಪೈಗಳ್ಳತನವು ಅದರ ಸ್ವಭಾವ. ಆತನ ಸಹಜ ಪ್ರವೃತ್ತಿಗಳೆಲ್ಲವೂ ಕೆಡುಕಿಗೆ ಎಳಿಸುವಂಥವು. ತನ್ನ 'ಬೇಕು-ಬೇಡ' ಗಳನ್ನು ಮಗು ತಾನಾಗಿಯೇ ತಿಳಿದುಕೊಳ್ಳಲಾರದು. ಈ ಬಗೆಯ ಕಲ್ಪನೆಯಿಂದ ಪ್ರೇರಿತರಾದ ಪ್ರಾಚೀನರು ಮಗುವಿನ ಸ್ವಾಭಾವಿಕವಾದ ಒಲವುಗಳನ್ನು ಒತ್ತಿಹಿಡಿಯುವುದರಲ್ಲಿಯೆ, ನಿಷ್ಠುರವಾದ ಕಟ್ಟುನಿಟ್ಟುಗಳಿಂದ ನಿಯಂತ್ರಿಸುವುದರಲ್ಲಿಯೆ, ಸಾರ್ಥಕತೆಯನ್ನು ಕಾಣುತ್ತಿದ್ದರು.

ಈ ಬಗೆಯ ತಪ್ಪು ಕಲ್ಪನೆಗಳಿಂದ ಮಗುವನ್ನು ಮುಕ್ತಗೊಳಿಸಿದ ರೂಸೋನ ವಿಚಾರಗಳನ್ನು ಇದಕ್ಕೆ ಪ್ರತಿಯಾಗಿ ಕಾಣಬಹುದು :—'Every thing is good as it comes from the hands of the Author of things ; everything degenerates between the hands of man...' ಸೃಷ್ಟಿಕರ್ತನ ಕೈಯಿಂದ ಹೊರಬೀಳುವಾಗ ಪ್ರತಿಯೊಂದು ವಸ್ತು ಸಾಧುವಾಗಿರುವುದು. ಮಾನವನ ಕೈಯಲ್ಲಿ ಅದು ಅಂದಗೆಡುವದು. ಮಾನವನ ಮೂಲ ಪ್ರಕೃತಿಯು ಸಾಧುವಾಗಿದೆ, ಶುದ್ಧವಾಗಿದೆ. ಸುತ್ತಲಿನ ದೂಷಿತವಾದ ಸಾಮಾಜಿಕ ಪರಿಸರದಿಂದ, ಆತನಿಗೆ ದೊರೆಯುವ ಅನಿಷ್ಟವಾದ ಸಂಸ್ಕಾರ ಶಿಕ್ಷಣಗಳಿಂದ ಮಾನವನ ಮೂಲ ಪ್ರಕೃತಿಯು ಮಲಿನವಾಗುವುದು. ಈ ಅಭಿಪ್ರಾಯಕ್ಕೆ ವಿರುದ್ಧವಾಗಿ ಮರಣದನಂತರ ನರಕದ ಯಾತನೆಯನ್ನು ತಪ್ಪಿಸಲು ಹುಟ್ಟಿನೊಡನೆ ಬಂದ ಸೈತಾನನನ್ನು ಹೊಡೆದೋಡಿಸಬೇಕು 'beating the Devil

out of him', ನಿರ್ದಯವಾಗಿ ನಿಯಂತ್ರಿಸುವುದರಲ್ಲಿಯೆ ಮಕ್ಕಳ ಶಾಶ್ವತ ಕಲ್ಯಾಣವಿರುವದೆಂದು ಪ್ರಾಚೀನರ ನಂಬುಗೆ ತಿಳುವಳಿಕೆಗಳಾಗಿದ್ದವು.

ಅಂದಿನ ಮಕ್ಕಳಿಗಾಗಿ 'ಶಿಸ್ತುದಂಡನೆ'ಗಳು ಈ ನಂಬುಗೆಯನ್ನೇ ಆಧರಿಸಿದ್ದವು. 'Spare the rod, spoil the child'—'ಬೆತ್ತದ ಉಪಯೋಗವನ್ನು ಮಾಡದಿದ್ದರೆ, ಮಗು ಕೆಟ್ಟು ಹೋಗುವುದು', ಎನ್ನುವ ರೀತಿಯನ್ನು ಪ್ರಾಚೀನರು ಅನುಸರಿಸುತ್ತಿದ್ದರು. ಮಗುವಿನ ವಯೋಮಾನಕ್ಕೆ ಅನುಚಿತವಾದ ವಿಷಯಗಳನ್ನು ಒಂದು ಪಾತ್ರೆಯಿಂದ ಮತ್ತೊಂದು ಪಾತ್ರೆಯಲ್ಲಿ ತುಂಬುವಂತೆ ಮಗುವಿನ ತಲೆಯಲ್ಲಿ ಬಲುಮೆಯಿಂದ ತರುಕುವರು. ಆ ವಿಷಯಂಗಳು ತಮಗೆ ಅಪೇಕ್ಷಿತವಾದವು, ಇಲ್ಲವೇ ಎಂದೋ ಮುಂದೆ ಮಗುವಿಗೆ ಪ್ರೌಢದೆಸೆಯಲ್ಲಿ ಉಪಯೋಗ ಬೀಳತಕ್ಕವುಗಳು, ಎಂಬುದು ಅವರ ಉದ್ದೇಶ. ಮಗುವಿಗೆ ಆ ವಿಷಯಗಳ ಅಗತ್ಯವಿರಲಿಲ್ಲ. ಅವುಗಳ ಉಪಯುಕ್ತತೆಯೂ ಹೊಳೆಯುವಂತಿರಲಿಲ್ಲ. ಬೆತ್ತದ ಭೀತಿಗಾಗಿ ಮಗು ಅರ್ಥ ತಿಳಿಯದೆ ಅವುಗಳನ್ನು ಕಂಠಪಾಠ ಮಾಡುವುದು. ಮಗುವಿನ ಮೂಲ ಪ್ರಕೃತಿಯು ಈ ಬಲುಮೆಯನ್ನು ಪ್ರತಿಭಟಿಸಿದರೆ, ಬಹು ಕಠೋರವಾದ ದಂಡನೆಗಳಿಗೆ ಮಗು ಒಳಗಾಗುವದು. ಮೂಲದಂಡಿಗೆ, ತಾಸುಗಟ್ಟಲೆ ಕಾಲಿನ ತುದಿಬೆರಳಿನ ಮೇಲೆ 'ಕುರ್ಚಿ' ಕೂಡುವುದು, ಇರುವೆಗಳಿಂದ ಕಚ್ಚಿಸುವುದು, ತಲೆಯ ಮೇಲೆ ಕಲ್ಲು ಹೊರಿಸಿ ನಿಲ್ಲಿಸುವುದು—ಈ ಬಗೆಯ ಇದಕ್ಕೂ ನಿರ್ದಯವಾದ ದಂಡನೆಗಳನ್ನು ಮಗುವಿಗೆ ಕೊಡಲಾಗುತ್ತಿತ್ತು. ಈ ಬಗೆಯ ಶಿಕ್ಷೆಗಳಿಂದ ಉದ್ದಿಷ್ಟವಾದ ವಿಧೇಯತೆಯೇನೋ ಮಗುವಿನಲ್ಲಿ

ಬರುವುದು. ಆದರೆ ಈ ವಿಧೇಯತೆ ಕೇವಲ ಭೀತಿಜನ್ಯ ವಾದುದು. ಮಗು ಕೈ ಕಟ್ಟಿಕೊಂಡು 'ಶಿಲಾಪ್ರತಿಮೆ'ಯಂತೆ ವರ್ಗದಲ್ಲಿ ಕುಳಿತುಕೊಳ್ಳುವದು. ಆದರೆ ಈ ಶಿಸ್ತು ಸ್ವಯಂಪ್ರೇರಿತವಾದುದಲ್ಲ. ಮಗುವಿಗೆ ಆದರಲ್ಲಿ ನಿಷ್ಠೆಯೂ ಇರಲಿಲ್ಲ. ಬೆತ್ತದ ಭೀತಿಯಿಂದ–ಛಡಿಯ ಏಟುಗಳನ್ನು ತಪ್ಪಿಸಿಕೊಳ್ಳಲು–ತನ್ನ ಸ್ವಾಭಾವಿಕ ಒಲವುಗಳನ್ನೆಲ್ಲ ಮಗು ಅದುಮಿಕೊಳ್ಳುವುದು. ತನ್ನ ಅಂದಿನ ಜೀವನಕ್ಕೆ ಅನುಗುಣ ವಾಗಿದ್ದ ಬಯಕೆಗಳನ್ನೆಲ್ಲ ಬೆತ್ತದ ಭೀತಿಗೆ ಬಲಿಗೊಡುತ್ತಿತ್ತು. ಅಂದಿನ ಮಕ್ಕಳಿಗೆ ಕೊಡಲಾಗುತ್ತಿದ್ದ ಕಠೋರ ಶಿಕ್ಷೆಗಳನ್ನು ನೆನೆದಾಗ ಇಂದು ನಮ್ಮ ಮೈ ನಡುಗುವುದು ; ಹೃದಯ ತಳಮಳಿಸುವುದು.

ಅಂದಿನ ಅವರ ತಿಳುವಳಿಕೆಗೆ ಅನುಗುಣವಾಗಿ ಹಿಂದಿನವರ ಉದ್ದೇಶವು ಮಕ್ಕಳಿಗೆ ಹಿತವಾಗಬೇಕೆಂಬುದೇ 'ಮಗು ಪ್ರಬುದ್ಧಮಾನವನ ಕಿರಿದಾದ ಮೂರ್ತಿ' (miniature man) ಎಂಬುದು ಬಹುಕಾಲದವರೆಗೆ ಪ್ರಾಚೀನರ ಕಲ್ಪನೆ ಯಾಗಿತ್ತು. ಪ್ರಬುದ್ಧವಾದ ತಮ್ಮ ದೃಷ್ಟಿಯಿಂದಲೆ ಅವರು ಮಕ್ಕಳನ್ನು ಕಾಣುತ್ತಿದ್ದರು. ತಮ್ಮ ಜೀವನದ ರೀತಿಗಳನ್ನು ವಿಚಾರಗಳನ್ನು – ಮಗುವನ್ನು ಮಗುವಾಗಿ ಪರಿಗಣಿಸದೆ ಒತ್ತಾಯದಿಂದ ಮಗುವಿನ ಮೇಲೆ ಹೇರುವದು ಅವರ ವಿಧಾನ ವಾಗಿತ್ತು. ಅಂದು ಪ್ರಚಲಿತವಾದ ಸದೋಷ ಮಾನಸ ಶಾಸ್ತ್ರವೂ ಅವರ ಈ ವಿಧಾನವನ್ನು ಅನುಮೋದಿಸುತ್ತಿತ್ತು. ಅಂದಿನ ಕಲ್ಪನೆಯಲ್ಲಿ ಶಿಕ್ಷಕನೇ ಪ್ರಧಾನ. ಕಲಿಯುವ ಮಗು ಆತನಿಗೆ ಅಧೀನ. ಶಿಕ್ಷಕನ ಕೈಯಲ್ಲಿ ಕೊಟ್ಟ ಒಂದು ಪಾತ್ರೆ ಯಿದ್ದಂತೆ. ಆ ಪಾತ್ರೆಯಲ್ಲಿ ಯಾವ ವಿಷಯವನ್ನಾಗಲಿ,

ಯಾರಾದರೂ ಸರಿ, ಹೇಗಾದರೂ ಸರಿ ಮಗುವೆಂಬ 'ಪಾತ್ರೆ' ಯಲ್ಲಿ ತುಂಬಬಹುದು. ಮಗು ಪ್ರತಿಭಟಿಸಿದರೆ, ಆತನ ಪ್ರತಿಕಾರವನ್ನು ಬಗ್ಗಿಸಲು ಬೆತ್ತದ ನಿರರ್ಗಳ ಉಪಯೋಗ. ಬೆತ್ತವನ್ನು ಹೆಚ್ಚು ಹೆಚ್ಚಾಗಿ ಉಪಯೋಗಿಸುವ ಶಿಕ್ಷಕನಿಗೆ ಹೆಚ್ಚಿನ ಮನ್ನಣೆ. ಅಂತೆಯೇ 'ಯಾವ ಕೆಲಸವನ್ನು ಮಾಡಲೂ ಅಸಮರ್ಥನಾದವನು ಕಲಿಸಬಲ್ಲನು' ಎಂಬ ಹೇಳಿಕೆಯು ಪ್ರಚಾರದಲ್ಲಿ ಬಂದಿರಬಹುದು. ಪ್ರಾಚೀನ ಚೀನಾದೇಶದಲ್ಲಿ ಅಂದಿನ ಆ ದೇಶದ ಮೂರು ತರಗತಿಯ ಪರೀಕ್ಷೆಗಳಲ್ಲಿ ಮೊಟ್ಟ ಮೊದಲಿನ ಪರೀಕ್ಷೆಯಲ್ಲಿಯೆ ನಾಪಾಸು ಆದವನಿಗೆ ಶಿಕ್ಷಕ ವೃತ್ತಿಯು ಮೀಸಲಾಗಿತ್ತು.

ವಿಷಯಗಳನ್ನು ಮಕ್ಕಳಿಗೆ ಬಲುವೆಂಯಿಂದ ಕಲಿಸುವದಕ್ಕೆ ಅಂದು ಪ್ರಚಲಿತವಾಗಿದ್ದ ಮಕ್ಕಳ ಮನೋಭೂಮಿಕೆಯ ಕಲ್ಪನೆಯೂ ಒಂದು ಕಾರಣವಾಗಿತ್ತು. ಮಕ್ಕಳಿಗಾಗಿ ವಿಷಯ ಗಳನ್ನು ಆಯ್ಕೆ ಮಾಡುವುದರಲ್ಲಿ ಪ್ರಾಚೀನರು ಎರಡು ಬಗೆಯ ಉದ್ದೇಶಗಳನ್ನಿಟ್ಟುಕೊಂಡಿದ್ದರು. ತಾವು ತಿಳಿದುಕೊಂಡಂತೆ, ಮಗು ಪ್ರಬುದ್ಧನಾದ ಮೇಲೆ ಆತನಿಗೆ ಮುಂದಿನ ಜೀವನದಲ್ಲಿ ಉಪಯುಕ್ತವಾದ ವಿಷಯಗಳು : ಇಲ್ಲವೆ ಮನಸ್ಸಿನ ವಿವಿಧ ಶಕ್ತಿಗಳನ್ನು ಪ್ರತ್ಯೇಕವಾಗಿ ತೀಡಲು ಸಹಾಯವಾಗಬಹುದಾದ ಬೇರೆ ವಿಷಯಗಳು. ಮಗುವಿನ ಇಂದಿನ ಜೀವಿತದ ವಿಚಾರ ವನ್ನೇ ಅವರು ಮಾಡುತ್ತಿರಲಿಲ್ಲ. ಮಗುವಿನ ಇಂದಿನ ಬೇಡಿಕೆಗಳ ಕಲ್ಪನೆಯೆ ಅವರಿಗಿರಲಿಲ್ಲ. ಅವಿಕಸಿತ ಶಕ್ತಿಯುಳ್ಳ ಮಗು ವನ್ನು ವಿಕಸಿತ ಶಕ್ತಿಯುಳ್ಳ ಪ್ರೌಢರಂತೆ ಭಾವಿಸಿ ಕೃತ್ರಿಮ ವಿಧಾನದಿಂದ ಶಿಕ್ಷಣ ಕೊಡುವುದು ಅನರ್ಥಕಾರಿಯಾಗುತ್ತದೆ. ಇಂಥ ಶಿಕ್ಷಣವು 'ಮಗುವಿನ ಕೊಲೆ' ಎಂದು ಮಗುವಿನ

ಹಿತ್ಸೈಷಿಯಾದ ಪೆಸ್ಟಲೋಝಿಯೆಂಬ ಶಿಕ್ಷಣತಜ್ಞನು ಹೇಳಿರುವನು.

ಮಕ್ಕಳ ಮನೋಭೂಮಿಕೆಯ ಬಗ್ಗೆ ಹಿಂದಿನವರ ತಿಳಿವಳಿಕೆಯು ತಪ್ಪಾಗಿತ್ತು. ಪರಸ್ಪರವಾಗಿ ಪ್ರತ್ಯೇಕವಾಗಿರುವ ಶಕ್ತಿಗಳಿರುವ ಮನೆಯೆ ಮನಸ್ಸು ಎಂಬುದು ಪ್ರಾಚೀನರ ಕಲ್ಪನೆ. ದೇಹದ ಬೇರೆ ಬೇರೆ ಅವಯವಗಳಿಗೆ ಬೇರೆ ಬೇರೆ ಪ್ರಕಾರದ ವ್ಯಾಯಾಮವನ್ನು, ಕಸರತ್ತನ್ನು ಕೊಟ್ಟು ಜಟ್ಟಿಗಳು ಅವುಗಳನ್ನು ಬಿಡಿಬಿಡಿಯಾಗಿ ಬಲಿಸುವರು. ಅದೇ ರೀತಿಯಲ್ಲಿ ಭಿನ್ನವಾದವುಗಳೆಂದು ಕಲ್ಪಿಸಿಕೊಂಡ ಮಾನಸಿಕ ಶಕ್ತಿಗಳಿಗೆ ಸಾಕಷ್ಟು ದುಡಿತ ಬೀಳುವಂತೆ ವಿವಿಧ ವಿಷಯಗಳನ್ನು ಪೂರ್ವಿಕರು ಮಕ್ಕಳಿಗೆ ಕಲಿಸಲು ಆಯ್ಕೆಮಾಡುತ್ತಿದ್ದರು. ಕವಿತೆಯನ್ನು ಕಲಿಸುವದು ಆದರ ರಸಾಸ್ವಾದಕ್ಕಾಗಿ ಅಲ್ಲ. ಕಲ್ಪನಾಶಕ್ತಿಯನ್ನು (Faculty of Imagination) ಅಭಿವೃದ್ಧಿಗೊಳಿಸುವದಕ್ಕಾಗಿ, ಗಣಿತಶಾಸ್ತ್ರವು ತರ್ಕಶಕ್ತಿಯನ್ನು (Faculty of Reasoning) ಹೆಚ್ಚಿಸುವುದಕ್ಕಾಗಿ, ಇಂದಿನ ಮಾನಸಶಾಸ್ತ್ರವು ಪ್ರತ್ಯೇಕಶಕ್ತಿಗಳ ಈ ಸಿದ್ಧಾಂತವನ್ನು ಸ್ಫೋಟಗೊಳಿಸಿದೆ. ಆಧುನಿಕ ಶಿಕ್ಷಣವು ಈ ಕಲ್ಪನೆಯನ್ನು ಸಾಧಾರವಾಗಿ ಅಲ್ಲಗಳೆದಿದೆ. ಮನಸ್ಸಿನ ಶಕ್ತಿಗಳು ಮನಸ್ಸಿನಿಂದ ಸ್ವತಂತ್ರವಾದವುಗಳಲ್ಲ ; ಒಂದಕ್ಕೊಂದು ಹೊಂದಿಕೆಯಿಲ್ಲದ ಬಿಡಿ ಶಕ್ತಿಗಳಾಗಿಲ್ಲ. ಒಟ್ಟು ಮನಸ್ಸಿನ ವಿಕಾಸದಲ್ಲಿ ಮೆಟ್ಟಿಲುಗಳಿವೆ : ಆದರೆ ಮನೋರಚನೆಯಲ್ಲಿ ಮೂಲತಃ ವಿಭಾಗಗಳಿಲ್ಲ. ಮನಸ್ಸಿನ ಕಾರ್ಯವು ಅನೇಕ ಮುಖವಾಗಿ ನಡೆದರೂ, ಮನಸ್ಸು ಮಾತ್ರ ತನ್ನಲ್ಲಿ ಏಕರೂಪವಾಗಿದೆ. ಅಖಂಡವೂ

ಅವಿಭಾಜ್ಯವೂ ಆಗಿರುವ ಈ ಮನಸ್ಸು ವಿಕಾಸ ಹೊಂದುವಂತೆ ಮಾಡುವುದೇ ಮಕ್ಕಳ ಮಾನಸಿಕ ಅಭಿವೃದ್ಧಿಯಾಗಿದೆ.

**ಇಂದಿನ ಮಗುವಿನ ಸ್ಥಾನಮಾನ:** ಇಂದಿನ ಮಗು ಹಿಂದಿನ ಅವೆಲ್ಲ ಅನಿಷ್ಟಸಂಗತಿಗಳನ್ನು ಬಿಟ್ಟುಕೊಟ್ಟಿದೆ. ಮಗು ಇಂದು ನವಯುಗದಲ್ಲಿ ಕಾಲಿಟ್ಟಿದೆ. ಆತನ ಸ್ಥಾನಮಾನಗಳೂ ಹೊಸ ಯುಗಕ್ಕೆ ತಕ್ಕಂತೆ ಬದಲಿಸಿವೆ. ಮಗುವಿನ ಶಿಕ್ಷಣವು ಇಂದು ಹೊಸಯುಗಕ್ಕೆ ತಕ್ಕಂತೆ ಬದಲಿಸಿವೆ. ಮಗುವಿನ ಶಿಕ್ಷಣವು ಇಂದು ಹೊಸ ಹಾದಿಗುಂಟ ಸಾಗಹತ್ತಿದೆ. ಇಂದಿನ ಮಗುವಿನ ಶಿಕ್ಷಣದಲ್ಲಿಯ ಉಪಕ್ರಮಗಳು ಮಕ್ಕಳ ಮಾನಸಶಾಸ್ತ್ರದ ಮೂಲ ತತ್ವಗಳ ತಳಹದಿಯ ಮೇಲೆ ನಿಂತಿವೆ. ನೂತನ ಶಿಕ್ಷಣದ ಅಧಿಷ್ಠಾತೃವು ಮಗು. ಮಗು ಶಿಕ್ಷಣದ ಪ್ರಾಣವಿದ್ದಂತೆ. ಮಗುವಿನ ಒಲವು ಶಕ್ತಿಗಳನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಹಿಂದಿನವರ ಕಲ್ಪನೆಯಂತೆ, ಮಗುವನ್ನು 'ಕಿರಿಯ ಪ್ರೌಢಮನುಷ್ಯ'ನನ್ನಾಗಿ ಭಾವಿಸುವಂತಿಲ್ಲ. 'ಮಗು ಮಗುವೇ'. ಮಗುವೆಂತಲೇ ಆತನಿಗೆ ಸಂಬಂಧಿಸಿದ ಎಲ್ಲ ವ್ಯವಹಾರಗಳಲ್ಲಿ ನಾವು ವರ್ತಿಸಬೇಕು. ಮಗುವಿನ ಅಂದಿನ ವಯೋಮಾನಕ್ಕೆ, ಆತನ ಒಲವು ಶಕ್ತಿಗಳಿಗೆ, ವಿಸಂಗತವಾದ ವಿಷಯಗಳನ್ನು ಯಾಂತ್ರಿಕ ಜಡವಿಧಾನದಿಂದ ಆತನಮೇಲೆ ಒಲುಮೆಯಿಂದ ಹೇರುವ ಅನ್ಯಾಯದಿಂದ ಮಗು ಇಂದು ಶಾಶ್ವತವಾಗಿ ಮುಕ್ತನಾಗಿರುವನು.

ಚಿಕ್ಕಮಕ್ಕಳು ತೋಟದಲ್ಲಿ ಬೆಳೆಯುವ ಸಸಿಗಳಂತೆ, ಶಿಕ್ಷಕನು ತೋಟಿಗನು. ಬೆಳೆಯುವ ಸಸಿಗೆ ಸಮರ್ಪಕವಾದ ನೆಲ-ನೀರು-ಬೆಳಕುಗಳ ಅನುಕೂಲತೆಯೂ ಬೇಕು ; ಕಸಕೀಟಕ

ಗಳಿಂದಾಗುವ ಕಂಟಕವೂ ದೂರವಾಗಬೇಕು. ಇವೆರಡನ್ನೂ ನೋಡಿಕೊಳ್ಳುವದು ತೋಟಗನ ಕಾರ್ಯ. ಶಿಕ್ಷಣ ಹಾಗೂ ತಂದೆತಾಯಿಗಳು ಚಿಕ್ಕಮಕ್ಕಳಲ್ಲಿರುವ ಸುಪ್ತ ಶಕ್ತಿಗಳು ಸ್ಫುಟವಾಗಲು ಹಾಗೂ ಸಮನ್ವಿತವಾಗಿ ವಿಕಾಸ ಹೊಂದಲು, ಸಮರ್ಪಕವಾದ ಸನ್ನಿವೇಶಗಳನ್ನು ಒದಗಿಸಬೇಕು. ಅವುಗಳ ವಿಕಾಸಕ್ಕೆ ಆತಂಕವಾಗುವ ಪ್ರತಿಕೂಲ ಸಂಗತಿಗಳನ್ನೆಲ್ಲ ನಿವಾರಿಸಬೇಕು. ವಯೋಮಾನಕ್ಕೆ ಅನುಗುಣವಾಗಿ ಮಕ್ಕಳ ನೈಸರ್ಗಿಕ ಶಕ್ತಿಗಳ ಸಹಜವಾದ, ಸಮರಸವಾದ ಬೆಳವಣಿಗೆಯೇ ಶಿಕ್ಷಣ. ಇದಕ್ಕೆ ಅನುವು – ಅನುಕೂಲತೆಗಳನ್ನು ಮಾಡಿಕೊಡುವದೆಲ್ಲ ಶಿಕ್ಷಕನ ಕಾರ್ಯ.

ಮಗುವಿನ ಎಲ್ಲ ವಯೋಮಾನಗಳಲ್ಲಿಯೂ ಬೆಳವಣಿಗೆಯು ಹಂತಹಂತವಾಗಿ ಮುಂದೊರೆಯುತ್ತಿರುವದು. ಗಿಡದ ಬೆಳವಣಿಗೆಯೆಂದರೆ ಟೊಂಗೆ ಇಲ್ಲವೆ ಯಾವುದೇ ಒಂದು ಭಾಗದ ಬೆಳವಣಿಗೆಯಾಗಿಲ್ಲ. ಬೇರಿನಿಂದ-ಎಲೆ, ಹೂ, ಹೀಚು, ಕಾಯಿ ಮೊದಲಾದ ಗಿಡದ ಸರ್ವಾಂಗಗಳ ಸಮನ್ವಿತವಾದ ಬೆಳವಣಿಗೆ. ಹೂ ಹೀಚು–ಕಾಯಿಗಳೆಂಬ ಎಲ್ಲ ಅವಸ್ಥೆಗಳಲ್ಲಿ ಸರಿಯಾಗಿ ಬೆಳೆದು ಬಂದರೇನೆ, ಚೆನ್ನಾದ, ಮಧುರವಾದ ಹಣ್ಣಿನ ನಿರ್ಮಿತಿಯಾಗುವುದು. ಶಿಶುವಾಗಿ ಬಾಲಕನಾಗಿ–ಎಲ್ಲ ಸ್ಥಿತ್ಯಂತರಗಳಲ್ಲಿಯೂ ಆತ್ಮಶಕ್ತಿಗಳ ಸರಿಯಾದ ವಿಕಾಸವಾದರೇನೆ ಮುಂದೆ ಮಗು 'ಪ್ರೌಢ' ಪದವಿಗೆ ಅರ್ಹನಾಗುವನು. ಮಕ್ಕಳಲ್ಲಿರುವ ಸ್ವಾಭಾವಿಕ ಕೃತಿ ಪ್ರೇಮವನ್ನೂ ಅವರವಿಕಾಸದ ಸಾಧನವಾಗಿ ಇಂದು ವಿನಿಯೋಗಿಸಿಕೊಳ್ಳುವುದುಂಟು.

## 7. ಶೈಶವನ ವಸಂತಕಾಲ

ಮಗುವಿನ ಇಂದಿನ ಸ್ಥಾನ ಮಾನದಲ್ಲಿ ಶೈಶವಕ್ಕೆ ವಿಶೇಷ ಮಹತಿಯು ಪ್ರಾಪ್ತವಾಗಿದೆ. ಶೈಶವವು ಜೀವನದ ಮಧು ಮಾಸ, ವಸಂತಋತು. ಜೀವನದಲ್ಲಿ 'ಬೌದ್ಧಿಕ ದಿಗ್ವಿಜಯ'ಕ್ಕಾಗಿ ಸನ್ನದ್ಧನಾದ ಮಗುವಿಗೆ ಎಲ್ಲವೂ ಹೊಸತು, ಎಲ್ಲವೂ ಹರುಷದಾಯಕ. ಮಗು ಹುಟ್ಟಿನಿಂದಲೂ ರಸಿಕ, ಸೌಂದರ್ಯ ಪ್ರೇಮಿ, ಬಾಲಗೋಪಾಲನಂತೆ ನಾದಲೋಲ. ಆತನ ಸುತ್ತು-ಮುತ್ತಲು ಬಗೆಬಗೆಯ ನಿಸರ್ಗದ ಸೌಂದರ್ಯವು ಚೆಲ್ಲವರಿದಿರುವದು, ಇಂಚರಗಳು ಕೇಳಬರುವವು. ಇವೆಲ್ಲವೂ ಮಗುವಿನ ಮನಸ್ಸನ್ನು ಬಲವಾಗಿ ಸೆಳೆಯುವವು. ಸೃಷ್ಟಿಯ ಬಗೆಬಗೆಯ ಹಾಗೂ ಚಣಚಣಕ್ಕೂ ಹೊಸದಾಗಿ ಕಾಣುವ ಸೊಬಗು ಮಗುವಿನ ಕಣ್ಮನಗಳಿಗೆ ರಸದೂಟ. ಈ ಸವಿಯೂಟದಿಂದಲೆ ಮಗುವಿನ ಮನದ ಮೊಗ್ಗು ಅರಳುವದು. ಮಗುವಿನ ಆತ್ಮ ಶಕ್ತಿಗಳು ಅರಳಿ ಆತನ ವಿಕಾಸವು ತಿಳಿಯದೆಯೆ ಸಾಧಿಸುವದು.

ಮಗುವಿನ ಶೈಶವದ ಅವಧಿಯು ಸಂತೋಷಪೂರ್ಣವಾಗಿರಬೇಕು. ಮಗು ಆಡಬೇಕು, ಹಾಡಬೇಕು, ನಗಬೇಕು, ನಲಿಯಬೇಕು. ಕಣ್ಣು ಕಿವಿಗಳಿಂದ ಸೃಷ್ಟಿಯ ಸೊಬಗು ಸುಮ್ಮಾನಗಳನ್ನು ಸವಿಸವಿದು ತಣಿಯಬೇಕು.

ಮಗುವಿನ ಶೈಶವವನ್ನು ಇಷ್ಟೊಂದು ಸುಖಮಯವಾಗಿ ನಾವು ಮಾಡುವೆವೆ? ನಿಸರ್ಗದೊಡನೆ ಮಗುವಿಗೆ ಮುಕ್ತವಾದ, ನಿಕಟ ಸಂಬಂಧವನ್ನು ತಂದುಕೊಡುವೆವೆ? ಆತನ ಅಂತರಂಗದ ಪ್ರೇರಣೆ ಪ್ರಚೋದನೆಗಳಿಗನುಗುಣವಾಗಿ ಮಗುವಿನ ಜೀವನವು ಶೈಶವದಲ್ಲಿ ನಿಸರ್ಗಾನುಸಾರಿಯಾಗಿ ನಡೆಯುವದೆ?

ಈ ಪ್ರಶ್ನೆಗಳಿಗೆ ಬಹುಶಃ 'ಇಲ್ಲ ಇಲ್ಲ' ವೆಂತಲೇ ಹೇಳ ಬೇಕಾಗುವದು. ಸೃಷ್ಟಿಯ ಸೊಬಗು ಆತನ ಮನಸ್ಸನ್ನು ಸೆಳೆಯುತ್ತಿರುವಾಗ, ಪಕ್ಷಿಗಳ ಕಿಲಕಿಲ ನಿನಾದಕ್ಕೆ ಆತನ ಕಿವಿ ಗಳು ಓಗೊಡುತ್ತಿರುವಾಗ, ಪಾಪ, ಆ ಮಗುವನ್ನು ನಾವು ವರ್ಗದ ಕೋಣೆಯಲ್ಲಿ-ಪಂಜರದಲ್ಲಿಯ ಪಕ್ಷಿಯಂತೆ ಬಂಧಿಸು ವೆವು. ಮಗುವಿನ ಮನವು ಹೊರಗಿನ ಸಮೃದ್ಧವಾದ ಸೊಬಗಿನ ಕಡೆಗೆ ಹರಿಯುತ್ತಿರುವಾಗ-ಆತನಿಗೆ ಅನಪೇಕ್ಷಿತವಾದ, ಅಂದಿನ ಆತನ ಜೀವನಕ್ಕೆ ಬೇಡವೆನಿಸುವ 'ಏನೇನೊ ವಿಷಯ'ಗಳನ್ನು ಆತನಲ್ಲಿ ತುಂಬಲು ಹವಣಿಸುವೆವು. ಭೀತಿಜನ್ಯವಾದ ಒತ್ತಾಯದ ಶಿಸ್ತನ್ನು ಆತನಮೇಲೆ ಹೇರಲು ಬಯಸುವೆವು. ಆದರಿಂದ ಮಧುಮಾಸವನ್ನು ಮಗುವಿನ ಪಾಲಿಗೆ ಮಾಗಿ ಯನ್ನಾಗಿ ಮಾಡುವೆವು. ಮಗುವಿನ ಹೃದಯವು ಮುದುಡು ವುದು. ಹೃದಯವು ಸೀದು ಹೋಗುವದು. 'If you nip the buds in the spring, can you expect fruits and flowers in summer ?— ಎಂದು ಕವಿಯೊಬ್ಬನು ಶೈಶವದ ಮಹತಿಯನ್ನು ಸೂಚಿಸಿರುವನು. ಮಗುವಿನ ಶೈಶವವು ಹರ್ಷದಾಯಕವಾಗದಿದ್ದರೆ, ಬುದ್ಧಿ ಹಾಗೂ ಭಾವಶಕ್ತಿಗಳ ಬಲವು ಕುಂಠಿತವಾಗುವದು. ಪ್ರಾಯ ಹಾಗೂ ವೃದ್ಧಾಪ್ಯ ಗಳೂ ಸತ್ವಹೀನವಾಗುವವು. 'I was like a torn away line from a verse' – ಒಂದು ಶ್ಲೋಕದಿಂದ ಪ್ರತ್ಯೇಕಿಸಿದ ಪಂಕ್ತಿಯಂತೆ,-ಸಾಂಪ್ರದಾಯಿಕ ಶಾಲೆಯಲ್ಲಿ ಕಲಿಯುವಾಗ್ಗೆ ತಮ್ಮ ಭಾವನೆಯಾಗಿತ್ತೆಂದು ಶ್ರೀ ಟಾಗೋರರು ತಮ್ಮ ಶೈಶವದ ಬಗ್ಗೆ ಒಂದೆಡೆಗೆ ಮಾರ್ಮಿಕವಾಗಿ ಹೇಳಿರುವರು.

ಕಣ್ಣೀರು ಸುರಿಸದೆ ಮಕ್ಕಳು ಕಲಿಯಲಾರರೆಂದು ಹಿಂದಿನವರ ಅಭಿಪ್ರಾಯವಾಗಿತ್ತು. ಬೆತ್ತದ ಛಡಿಯ ಉಪಯೋಗವು ತೀರ ಅಗತ್ಯವೆಂದು ಅವರ ಭಾವನೆ. ಇಂದಿನ ಶಿಕ್ಷಣವು ಒಲುಮೆ ಬೆದರಿಕೆಗಳ ಹಾದಿಯನ್ನು ಬಿಟ್ಟುಕೊಟ್ಟಿದೆ. 'ಕಲಿಯುವದು ಕ್ರೀಡೆಯಾಗಬೇಕು' ಎಂಬುದು ಇಂದಿನ ವಿಧಾನವಾಗಿದೆ. ಆಟದಲ್ಲಿಯ ಅನಿಮಿತ್ತ ಆನಂದವನ್ನು ತೊಡೆದರೆ, ಕಟುವೆಂದು ತೋರುವ ಕಲಿಯುವ ಕ್ರಿಯೆಯೂ ಸ್ವಾದುಮಯವಾಗುವದು. ಕ್ರೀಡಾಂಗ ಪದ್ಧತಿಯ ವಿವಿಧ ವಿಧಾನಗಳನ್ನು ಬಳಸುವದರಿಂದ ಕ್ರೀಡೆಯ ಅಂತಃಸತ್ವವು ಕಲಿಯುವದರಲ್ಲಿ ಸಹಕರಿಸುತ್ತಿದೆ.

'ಮಗು ಆಟದಲ್ಲಿಯೆ ವೇಳೆ ಕಳೆಯುತ್ತಾನೆ, ಓದುವದೇ ಕಡಿಮೆ' ಎಂದು ಹಳಬರು ದೂರಿಕೊಳ್ಳುವದುಂಟು. ಆಟದ ವಿಧಾನಗಳು ಮಗುವಿನ ಅಧ್ಯಯನವನ್ನು ಹೇಗೆ ಸುಗಮ ಗೊಳಿಸುತ್ತವೆ, ಸಂತೋಷಮಯವಾಗಿ ಮಾಡುತ್ತವೆ, ಎಂಬುದರ ಅರಿವನ್ನು ಅವರಿಗೆ ಮಾಡಿಕೊಡಬೇಕು. 'ಕ್ರೀಡೆಯ ಮನೋಭೂಮಿಕೆಯನ್ನೇ ಕಲಿಯುವ ಕಾರ್ಯದಲ್ಲಿ ಉಂಟು ಮಾಡುವದು', ಎಂಬುದು ಅವರಿಗೆ ಹೊಳೆಯುವಂತಾಗಬೇಕು. Teaching is in making the disciple delight in learning– 'ಕಲಿಯುವವರಲ್ಲಿ ಮಗು ಸಂತೋಷಗೊಳ್ಳುವಂತೆ, ಮಾಡುವುದೇ ಕಲಿಸುವದಾಗಿದೆ'–ಎಂದು ರೂಸೋ ಹೇಳಿ ರುವನು. ಕಲಿಸುವುದರಲ್ಲಿ ಕ್ರೀಡೆಯ ಮನೋಭೂಮಿಕೆ ಯನ್ನುಂಟುಮಾಡಿದರೆ ಈ ಉದ್ದೇಶವು ಸಫಲವಾಗುವುದು. 'Make game an education and education a game'- 'ಕ್ರೀಡೆಯನ್ನು ಶಿಕ್ಷಣವನ್ನಾಗಿ ಮಾಡಿರಿ ; ಶಿಕ್ಷಣವನ್ನು ಕ್ರೀಡೆ

ಯನ್ನಾಗಿ ಮಾಡಿರಿ' ಎಂಬುವ ರೂಸೋನ ಹೇಳಿಕೆಯು ಇದೇ ಮಾತನ್ನೇ ಇನ್ನಷ್ಟು ಸಮರ್ಥಿಸುತ್ತದೆ.

## 8. ಬೆಳವಣಿಗೆ ವಿಕಾಸ

ಮಗುವಿನ ಸ್ವರೂಪ, ಮಗು ಮಗುಗಳಲ್ಲಿಯ ವೈಷಮ್ಯ ಹಾಗೂ ವೈಲಕ್ಷಣ್ಯಗಳನ್ನು ಸಾಮಾನ್ಯವಾಗಿಯಾದರೂ ತಿಳಿದು ಕೊಳ್ಳುವಂತೆ, ಮಗುವಿನ ಬೆಳವಣಿಗೆ ಹಾಗೂ ವಿಕಾಸಗಳಲ್ಲಿಯ ಹೆಗ್ಗುರುತುಗಳನ್ನಾದರೂ ತಂದೆತಾಯಿಗಳು ಸ್ಥೂಲವಾಗಿಯಾದರೂ ಅರಿತುಕೊಳ್ಳುವುದು ಅಗತ್ಯವಾಗಿದೆ.

ಬೆಳವಣಿಗೆ ಹಾಗೂ ವಿಕಾಸಗಳು ಚೈತನ್ಯದ ಕುರುಹುಗಳು. ಚೈತನ್ಯವಿರುವಲ್ಲಿ ಬೆಳವಣಿಗೆಯುಂಟು. ಕಲ್ಲುಕಟ್ಟಿಗೆಗಳು ಜಡ ವಸ್ತುಗಳು. ಅವುಗಳಿಗೆ ಬೆಳವಣಿಗೆಯಿಲ್ಲ. ಚೈತನ್ಯವುಳ್ಳ ಪಶುಪಕ್ಷಿಗಳ, ಕ್ರಿಮಿಕೀಟಗಳ ಬೆಳವಣಿಗೆಯನ್ನು ನಾವು ನೋಡುವೆವು. ತರುಲತೆಗಳಿಗೂ ಒಂದು ಬಗೆಯ ಚೈತನ್ಯವಿರುವುದು. ಬೀಜವು ಅಂಕುರಿಸುವುದು, ಬೆಳದು ಮರವಾಗುವುದು.

ಮಗು ಕೇವಲ 'ಸಚೇತನ' ಪ್ರಾಣಿಯಾಗಿಲ್ಲ. ಆತನಿಗೆ 'ಆತ್ಮ'ವೆಂಬುದೊಂದಿದೆ, ಮನಸ್ಸಿದೆ, ಮಗುವಿನ ಅಭಿವೃದ್ಧಿಯು ದ್ವಿಮುಖವಾದುದು. ಆತನ ಶಾರೀರಿಕ ಅಭಿವೃದ್ಧಿಯು ಬಹಿರಂಗವಾದುದು ; ಸ್ಪಷ್ಟವಾಗಿ ಕಾಣುವಂಥದು: ನಿಲುವಿಕೆ ಎತ್ತರವಾಗುವುದು. ಅವಯವಗಳು ಪ್ರಮಾಣಬದ್ಧವಾಗಿ ಪುಷ್ಟವಾಗುವುವು. ವಯೋಮಾನಕ್ಕೆ ಅನುಗುಣವಾಗಿ ಆಗಾಗ್ಗೆ ಶಾರೀರಿಕವಾದ ಕೆಲವೊಂದು ವ್ಯತ್ಯಾಸಗಳು ತಲೆದೋರುವುವು. ಬಹಿರಂಗವಾದ ಶಾರೀರದ ರೂಪಾಂತರಗಳಿಗೇನೆ 'ಬೆಳವಣಿಗೆ' ಯೆಂದು ಹೇಳುವುದುಂಟು. ಆತ್ಮ

ಪ್ರಕಾಶನ ; ಒಳಗಿನ ಆತ್ಮಶಕ್ತಿಗಳು ತಮಗೆ ಸಕಾಲವಾದ ಸಮಯ ಗಳಲ್ಲಿ ಅರಳುವುದಕ್ಕೇನೆ 'ವಿಕಾಸ'ವೆನ್ನುವರು. 'ಬೆಳವಣಿಗೆ' 'ವಿಕಾಸ' ಇವೆರಡೂ ಶಬ್ದಗಳ ಉಪಯೋಗದಲ್ಲಿ ನಾವು ಅಷ್ಟೊಂದು ದಕ್ಷತೆ ವಹಿಸುವುದಿಲ್ಲ. ಇವೆರಡೂ ಶಬ್ದಗಳು ಸೂಚಿ ಸುವ ಅಂತರವನ್ನು ಅರಿತುಕೊಳ್ಳುವುದು ಅವಶ್ಯವಾಗಿದೆ.

ಮಗುವಿನ ಶರೀರದ ಬೆಳವಣಿಗೆಯೊಡನೆ ಆತನ ಆತ್ಮ ಶಕ್ತಿಗಳೂ ಒಂದು ಕ್ರಮದಿಂದ ಅರಳುತ್ತ ಹೋಗುವುವು. ಮಗುವಿನ ಅಂತರಂಗ–ಬಹಿರಂಗಗಳ ಜತೆಜತೆಯಾದ ಈ ಬೆಳ ವಣಿಗೆ ವಿಕಾಸಗಳು ಅತ್ಯಂತ ಸೋಜಿಗವಾದವುಗಳಾಗಿವೆ. ಇಂದಿನ ಶರೀರವಿಜ್ಞಾನಶಾಸ್ತ್ರವೂ, ಮಾನಸಶಾಸ್ತ್ರವೂ ಈ ಬೆಳವಣಿಗೆಯ ವಿಧಾನಗಳನ್ನೂ, ವೈಶಿಷ್ಟ್ಯಗಳನ್ನೂ ಸೂಕ್ಷ್ಮ ನಿರೀಕ್ಷಣ ಪರೀಕ್ಷಣಗಳಿಂದ ಕಂಡುಹಿಡಿದಿದೆ.

ಶಾರೀರಿಕ ಮಾನಸಿಕವಾದ ಈ ಬೆಳವಣಿಗೆ ವಿಕಾಸಗಳು ಜೀವನದ ಮೊದಲಿನ ಹದಿನೆಂಟು ವರುಷಗಳಲ್ಲಿ ಪರಿಮಿತದ ಕ್ರಮದಲ್ಲಿ ಸಾಗಿಬಂದು, ಆಗ್ಗೆ ಕೊನೆಗೊಳ್ಳುವುವು. ಶಾರೀರಿಕ ಮಾನಸಿಕ ಬೆಳವಣಿಗೆ ಮತ್ತು ವಿಕಾಸಗಳಲ್ಲಿ ಒಂದು ಕ್ರಮವಿರು ವಂತೆ, ಇವೆರಡರಲ್ಲಿ ಅನ್ಯೋನ್ಯವಾದ ಅವಿಭಾಜ್ಯವಾದ ಸಂಬಂಧವೂ ಇರುವುದು. ಬೆಳವಣಿಗೆ ಮತ್ತು ವಿಕಾಸಗಳು ಸಂತತವಾಗಿ, ಸಾವಧಾನವಾಗಿ ನಡೆಯುವ ಕಾರ್ಯ. ಜೀವನದ ವಿಕಸೂತ್ರತೆ, ಅಖಂಡತೆಯೇ ಇದಕ್ಕೆ ಕಾರಣವಾಗಿರುವುದು. ಹಿಂದಿನ ಅವಸ್ಥೆಯು ಮುಂದಿನ ಅವಸ್ಥೆಗೆ ಮಗುವನ್ನು ತಿಳಿಯ ದೆಯೆ ತಂದುಬಿಡುವುದು. ಮಗು ನಡೆಯುವುದನ್ನು, ಮಾತ ನಾಡುವುದನ್ನು ಕಲಿಯುವಾಗ, ಆತನನ್ನು ಸೂಕ್ಷ್ಮವಾಗಿ ನಿರೀಕ್ಷಿಸ

ಬೇಕು. ಅಂದರೆ ಈ ಮಾತು ಮನದಟ್ಟಾಗುವುದು. ಮಳೆ ಬೀಳುವುದನ್ನು ಮಾತ್ರ ನಾವು ನೋಡುವೆವು. ಮಳೆಯ ಮೂರ್ತಸ್ವರೂಪಕ್ಕೆ ಹಿನ್ನೆಲೆಯಾಗಿ ನಮಗೆ ಅದೃಶ್ಯವಾದ ಅನೇಕ ವಿಧಾನಗಳು ನಡೆಯುವುವು. ಸೆಕೆಯಿಂದ ನೀರು ಆವಿಯಾಗುವುದು; ಹವೆಯೊಡನೆ ಬೆರೆತುಕೊಳ್ಳುವುದು, ಹಗುರಾದ ಹವೆಯೊಡನೆ ಮೇಲೆ ಏರುವುದು, ಮೋಡ ರೂಪ ತಾಳುವುದು, ಚಿಕ್ಕಹನಿಗಳು ಬೆರೆತುಕೊಂಡು ಭಾರವಾಗಿ ಕೆಳಗೆ ಬೀಳುವುದು–ಮುಂತಾದ ಇವೆಲ್ಲ ಸಂಗತಿಗಳು ನಮಗೆ ಕಣ್ಮರೆಯಾಗಿ ನಡೆಯುವುವು. 'ಬೀಳುವ ಮಳೆ'ಯೊಂದೇ ನಮಗೆ ಕಾಣುವುದು.

ಮಗು ನಡೆಯಲು, ಮಾತನಾಡಲು ಕಲಿಯುವುದಕ್ಕೂ ಹೀಗೆಯೇ ಅದೃಶ್ಯವಾದ ಹಿನ್ನೆಲೆಯಿರುವುದು. ಒಂದು ದಿನ ಮಗು ನಡೆಯಹತ್ತುವುದು ಮಾತ್ರ ನಮ್ಮ ಕಣ್ಣಿಗೆ ಬೀಳುತ್ತದೆ. ಆದರೆ ಅದಕ್ಕಾಗಿ ಆ ಮೊದಲು ಮಗು ಮಾಡುವ ಸಾಹಸವೂ, ಪಟ್ಟ ಪರಿಶ್ರಮವೂ ನಮಗೆ ಅಜ್ಞಾತವಾಗಿಯೇ ಸಾಗುವುವು. ತನ್ನ ಇಂದ್ರಿಯಗಳ ನಿಯಂತ್ರಣಕ್ಕಾಗಿ, ತನ್ನ ಜೀವನಕ್ಕೆ ಅವುಗಳನ್ನು ಅಣಿಗೊಳಿಸುವುದಕ್ಕಾಗಿ ಹುಟ್ಟಿದಂದಿನಿಂದಲೆ ಮಗು ಆಂತರಿಕ ಪ್ರೇರಣೆಯಿಂದ ಹವಣಿಸುತ್ತಿರುವುದು. ನಡೆಯುವ ಮೊದಲು, ತತ್ತರಿಸುವ ಮಗು ಸ್ಥಿರವಾಗಿ ನಿಂತುಕೊಳ್ಳಲು ರೂಢಿ ಮಾಡಿಕೊಳ್ಳುವುದು. ತಪ್ಪುಹೆಜ್ಜೆ, ತೊಡಕು ಹೆಜ್ಜೆಗಳನ್ನಿಟ್ಟು ಅನಂತರ ನೇರವಾಗಿ ನಡೆಯುವುದನ್ನು ಸಾಧಿಸುವುದು. ಈ ತಪ್ಪುಹೆಜ್ಜೆ, ತೊಡಕು ಹೆಜ್ಜೆಗಳು ಮಗು ನಡೆಯಲು ಕಲಿಯುವ ಅವಧಿಯಲ್ಲಿ ವಿಶಿಷ್ಟವಾದ ಅವಸ್ಥೆಗಳು, ಮೆಟ್ಟಿಲುಗಳು ಆಗಿರುವುವು. ಇವುಗಳಲ್ಲಿ ಯಾವು

ದನ್ನೂ ಮಗು ಬಿಡಲಾರದು. ಒಂದನ್ನು ಬಿಟ್ಟು ಮುಂದಿನದಕ್ಕೆ ಜಿಗಿಯಲಾರದು.

ಮಗು ಮಾತು ಕಲಿಯುವುದಾದರೂ ಹೀಗೆಯೆ ಈ ಅವಸ್ಥಾ ವಿಶೇಷಗಳ ಏರಿಳಿತಗಳೇನೆ ಇರಲಿ, ಮಗುವಿನ ದ್ವಿಮುಖವಾದ ಬೆಳವಣಿಗೆಯು ಅಖಂಡವಾಗಿದೆ, ಅವಿಚ್ಛಿನ್ನ ವಾಗಿದೆಯೆಂಬುದನ್ನು ಮರೆಯುವಂತಿಲ್ಲ. ಈ ವಿಕಾಸವು ಬೇಗನಿಂದಲೆ, ತಿಳಿಯದಂತೆ ಸಾಗಿರುತ್ತದೆ. ಒಂದೇ ನದಿಯ ಪ್ರವಾಹದಲ್ಲಿ ತೆರೆಗಳು, ಸುಳಿಗಳು, ಮಡುವು, ತಡಸಲುಗಳು ಇರುವಂತೆ ಏಕಸೂತ್ರವಾದ ಜೀವನದ ಝರಿಯಲ್ಲಿ ಈ ಏರಿಳಿತ ಗಳು ಕಂಡುಬರುವುವು. ಎಲ್ಲ ಅವಸ್ಥೆಗಳನ್ನು ಆಚರಿಸಿ, ಅನುಭವಿಸಿಯೆ ಮಗು ಮುನ್ನಡೆಯಬೇಕು ; ಬೆಳವಣಿಗೆ ವಿಕಾಸ ಗಳ ತುಟ್ಟತುದಿಯಾದ 'ಪಕ್ವತೆ' (maturity)ಯ ಕಡೆಗೆ ಸಾಗ ಬೇಕು. ಬೆಳವಣಿಗೆ ವಿಕಾಸಗಳೆರಡೂ ಹಂತಹಂತವಾಗಿ, ಸಮನ್ವಿತವಾಗಿ ನಡೆದು ಪಕ್ವತೆಯ ದೆಸೆಯನ್ನು ಮುಟ್ಟುವುವು. ಮೊಗ್ಗು ಇಲ್ಲದೆ ಹೂವಿಲ್ಲ. ಮೊಗ್ಗು ಅರಳಿ ಹೂವಾಗಬೇಕು. ಹೂ ಹೀಚಾಗಬೇಕು. ಹೀಚು ಕಾಯಾಗಬೇಕು. ಕಾಯಿ ಪಸಿತು ಹಣ್ಣಾಗಬೇಕು. ಒಂದು ಹಂತವು ಮುಂದಿನದಕ್ಕೆ ದಾರಿ ಮಾಡಿಕೊಡುವುದು. ಹೀಚು ಕಾಯಿಗೆ, ಕಾಯಿ ಹಣ್ಣಿಗೆ ಮೆಟ್ಟಿಲುಗಳಾಗುವುವು.

ಬೆಳವಣಿಗೆ ವಿಕಾಸಗಳು ಬೇಕು ಬೇಕಾದಂತೆ, ಅನಿಯ ಮಿತವಾದ ಲಹರಿಯಲ್ಲಿ ನಡೆಯುವದಿಲ್ಲ. ಅವುಗಳಲ್ಲಿ ತಾಳ ಲಯವಿದೆ, ಅನುಕ್ರಮವಿದೆ, ನಿರ್ದಿಷ್ಟ ಕಾಲಾವಧಿಗಳಿವೆ. ನಿರಂತರವಾಗಿ ಎಲ್ಲರಿಗೂ ಸಮಾನವಾದ ಪಡಿಯಚ್ಚಿನಲ್ಲಿ ಅವು ಸಾಗುವುವು.

## 9. ಮಗುವಿಗೆ ಎಂಥ ಶಿಕ್ಷಣವಿರಬೇಕು ?

ತನ್ನ ತಾಯಿಯ ಹೊಟ್ಟೆಯಲ್ಲಿ ಮೂಡಿದಂದಿನಿಂದ ಭೂಮಿ ತಾಯಿಯ ಹೊಟ್ಟೆಯಲ್ಲಿ ಸೇರುವವರೆಗೆ ಮಗುವಿಗೆ ಆತ್ಮ ಸಂಸ್ಕಾರರೂಪವಾದ ಶಿಕ್ಷಣವು ಅವಿರತವಾಗಿ ಸಾಗುವದು. ಮಗು ತನ್ನ ಎಲ್ಲ ಇಂದ್ರಿಯಗಳನ್ನು ಮೆಲ್ಲ ಮೆಲ್ಲಗೆ ತನ್ನ ನಿಯಂತ್ರಣದಲ್ಲಿ ತಂದುಕೊಳ್ಳುವದು, 'ವಿಶ್ವದ ಬೌದ್ಧಿಕ ದಿಗ್ವಿಜಯ'ಕ್ಕಾಗಿ ಹೋರಾಡುವದು. ಈ ಹೋರಾಟದಲ್ಲಿ ಇಂದ್ರಿಯಗಳ ಮುಖಾಂತರವಾಗಿ ದೊರೆಯುವ ಅನುಭವಗಳ ಅವಶೇಷಗಳೆ ಮಗುವಿನ ಜ್ಞಾನದ ಮೂಲಧನವು. ಈ ಆತ್ಮ ಸಂಸ್ಕಾರರೂಪವಾದ ಶಿಕ್ಷಣದಿಂದಲೆ ಬೆಳೆದು ದೊಡ್ಡವನಾದಂತೆ ಮಗು ತನ್ನ ಪರಿಸರಕ್ಕೆ ಹೊಂದಿಕೊಳ್ಳುವನು, ಜೀವನದಲ್ಲಿ ಒದಗುವ ಪರಿಸರಕ್ಕೆ ಹೊಂದಿಕೊಳ್ಳುವನು.

ಆದರೆ ಈ ಅನಿಯಂತ್ರಿತವಾದ, ಅವ್ಯವಸ್ಥಿತವಾದ ಸಂಸ್ಕಾರಗಳು ಮಗುವಿಗೆ ಜೀವನಕ್ಕೆ ಅಗತ್ಯವಾದ ಎಲ್ಲ ಅನು ಭವಗಳನ್ನು ಒದಗಿಸಲಾರವು. ಎಲ್ಲ ಸಂಗತಿಗಳನ್ನು ಮಗು ತಾನಾಗಿಯೆ ಶೋಧಿಸಿ, ಅನುಭವಿಸಿ ಕಂಡುಹಿಡಿಯಲಾರದು. ಆದರಿಂದ ಮಗುವಿನ ಜ್ಞಾನದಲ್ಲಿ ಬಹುದೊಡ್ಡ ಕೊರತೆ ಯಾಗುವುದು. ಮಗು ಲೋಕಾನುಭವಕ್ಕೆ ಎರಗಾಗುವನು. 'ಕೆಲವಂ ಬಲ್ಲವರಿಂದ ಕಲಿತು,ಕೆಲವಂ ಶಾಸ್ತ್ರಂಗಳಿಂ ಕೇಳುತಾ...' ಈ ಬಗೆಯ ಜ್ಞಾನದ ಮೂಲಗಳನ್ನು ಮಗು ಕಳೆದುಕೊಳ್ಳ ಬೇಕಾಗುವದು.

ಈ ನ್ಯೂನತೆಗಳನ್ನು ನಿವಾರಿಸುವುದಕ್ಕಾಗಿ 'ಕ್ರಮಬದ್ಧ ಶಿಕ್ಷಣ'ವು ಅಗತ್ಯವೆನಿಸುವದು. ಜೀವನದ ಗುಂಟ ತಾನಾಗಿ

ನಡೆಯುವ ಸಂಸ್ಕಾರಕ್ಕೆ ಈ ಶಿಕ್ಷಣವು ಪೂರಕವಾಗುವದು. ಶಿಕ್ಷಣ ಸಂಸ್ಥೆಗಳಲ್ಲಿ ಏರ್ಪಾಡು ಮಾಡುವ ಶಿಕ್ಷಣವೇ ಕ್ರಮಬದ್ಧ ಶಿಕ್ಷಣವು. ಒಂದು ನಿರ್ಧಿಷ್ಟ ಯೋಜನೆಯ ಮೇರೆಗೆ ಮಗುವಿಗೆ ಉಚಿತವಾದ ಸಂಸ್ಕಾರಗಳನ್ನು ಇವುಗಳಲ್ಲಿ ಒದಗಿಸಲಾಗುವದು. ಎಳೆಯ ಮಗುವಿನಲ್ಲಿರುವ ಚೈತನ್ಯವು ಬೀಜರೂಪವಾದುದು. ಅದು ಅಂಕುರಿಸಿ, ಬೆಳೆದು, ಮರವಾಗಿ ಮುಂದೆ ಫಲಿಸುವಂತೆ ಮಾಡುವದೇ ಶಾಲೆಯ ವ್ಯವಸ್ಥಿತ ಶಿಕ್ಷಣ.

ಮಾನವಜೀವಿಗೆ ಒಂದು ಧ್ಯೇಯವು ಅಗತ್ಯವಿರುವಂತೆ, ಕ್ರಮಬದ್ಧ ಶಿಕ್ಷಣಕ್ಕೂ ನಿರ್ದಿಷ್ಟವಾದ ಒಂದು ಗೊತ್ತು ಗುರಿ ಇರಬೇಕಾಗುವದು. ಸಮಗ್ರ ಶಿಕ್ಷಣದಲ್ಲಿ ಈ ಗುರಿಯು ಹಾಸು ಹೊಕ್ಕಾಗಿ ಕಾಣಿಸಿಕೊಳ್ಳುವದು. ಮಗುವಿನ ಸ್ವಾಭಾವಿಕ ಒಲವು ಶಕ್ತಿಗಳಿಗೆ ಉಚಿತವಾದ ಸಂಸ್ಕಾರ ದೊರೆಯಬೇಕು ; ಯಾವ ಉದ್ದೇಶದ ಸಿದ್ಧಿಗಾಗಿ ?– ಮಗುವಿನ ಆತ್ಮಶಕ್ತಿಗಳು ವಿಕಾಸ ಪಡೆಯಬೇಕು – ಯಾವ ಶಕ್ತಿ ಸದ್ಗುಣಗಳನ್ನು ಸಂಪಾದಿಸುವುದಕ್ಕಾಗಿ ? ಶಿಕ್ಷಣದ ಗುರಿಯು ಈ ಅಂತಿಮ ಫಲವನ್ನು ಸಿದ್ಧಪಡಿಸುವದು.

ಧ್ಯೇಯರಹಿತವಾದ ವ್ಯಕ್ತಿಯ ಜೀವನವನ್ನು 'ನಿರ್ಗಂಧ ಕುಸುಮ'ಕ್ಕೆ ಹೋಲಿಸುವರು. ಹೂವಿನ ಬಣ್ಣಬೆಡಗುಗಳು ಎಷ್ಟೇ ಮೋಹಕವಾಗಿರಲಿ, ಸುವಾಸನೆ ಇರದಿದ್ದರೆ ಆ ಹೂವಿಗೆ ಬೆಲೆಯಿಲ್ಲ. ದೇವರ ಪೂಜೆಗೂ ಅದು ಸಲ್ಲದು. ಹೀಗೆಯೇ ಗುರಿಯಿಲ್ಲದ ಶಿಕ್ಷಣವು 'ಕಣ್ಣಿದ್ದರೂ ಕುರುಡನಂತೆ' ತೇಲಿಸುವ ನಾವೆಯಿದ್ದರೂ ಗತಿಯನ್ನು ನಿಯಂತ್ರಿಸುವ ಚುಕ್ಕಾಣಿ ಇಲ್ಲದಂತೆ.

ಶಿಕ್ಷಣದ ಗೊತ್ತುಗುರಿಯು ದೇಶಕಾಲಗಳಿಗನುಗುಣವಾಗಿ ಬದಲಿಸುವದು ಕಂಡು ಬರುವದು, ಆದರೆ ಶಿಕ್ಷಣದ ಮೂಲೋದ್ದೇಶವು ಸನಾತನವಾಗಿರುವದು. ಅದು ದೇಶ ಕಾಲಗಳನ್ನನುಸರಿಸಿ, ತನ್ನ ಮುಖ ತಿರುಗಿಸಬೇಕಾಗಿಲ್ಲ. ಅದು ಸರ್ವಕಾಲೀನವಾದುದು, ಸರ್ವಸಾಮಾನ್ಯವಾದುದು. ಅದು ಹೀಗೆ : — ಮಗುವಿನ ಒಲವು ಶಕ್ತಿಗಳಿಗೆ ಸಮರ್ಪಕವಾದ ಸಂಸ್ಕಾರವು ದೊರೆಯಬೇಕು. ಆತನಲ್ಲಿರುವ ಸರ್ವವಿಧ ಶಕ್ತಿಗಳನ್ನು ಪ್ರಕಟಗೊಳಿಸಬೇಕು, ವಿಕಾಸಗೊಳಿಸಬೇಕು. ಸ್ವಂತದ ಜೀವನವನ್ನು ಸಾಮಾಜಿಕ ಜೀವನಕ್ಕೆ ಹೊಂದಿಸಿಕೊಂಡು ಎರಡನ್ನೂ ಸರಿಯಾಗಿ ಸಾಗಿಸುವ ಶಕ್ತಿ ಪಾತ್ರತೆಗಳನ್ನು ಶಿಕ್ಷಣವು ಮಗುವಿಗೆ ತಂದುಕೊಡಬೇಕು.

## 10. ಮಗುವಿನ ಶಿಕ್ಷಣದ ಬಗ್ಗೆ ಕೆಲವು ಮಹನೀಯರ ವಿಚಾರಗಳು

ಡ್ರೀವರ್ : ಮಗುವಿನಲ್ಲಿರುವ ಸುಪ್ತ ಶಕ್ತಿಗಳನ್ನು ಪ್ರಕಟಿಸುವದು ಮಾತ್ರ ಶಿಕ್ಷಣವಲ್ಲ, ಅವುಗಳ ಸರಿಯಾದ ಜೋಪಾಸನೆ, ಕ್ರಮಬದ್ಧವಾದ ವಿಕಾಸವೂ ಕೂಡ.

ಅಡಾಮ್ಸ್ : ಅಂತರಿಕವಾಗಿ, ಸ್ವಯಂಪ್ರೇರಿತವಾಗಿ ಸಾಗುತ್ತಿರುವ ಶಿಕ್ಷಣದ ವಿಧಾನಗಳಿಗೆ ಸಮುಚಿತವಾದ ಹಂತಗಳಲ್ಲಿ ಸಂಯೋಜಿತ ಹಾಗೂ ಸಹೇತುಕ ಚಟುವಟಿಕೆಗಳನ್ನು ಒದಗಿಸಿ ವಿಕಾಸಗೊಳಿಸುವದು.

ಡ್ಯೂಯಿ : ಮನೆಯ ನಾಲ್ಕು ಗೋಡೆಗಳಿಗೆ ಮರ್ಯಾದಿತವಾದ ಮಗುವಿನ ಜೀವನವನ್ನು ವಿಶಾಲಗೊಳಿಸಿ ಸಾಮಾಜಿಕ ಜೀವನಕ್ಕೆ ಆತನನ್ನು ಅಣಿಗೊಳಿಸುವದು.

**ರೂಸೋ :** ಮಗುವಿನ ಜೀವನವನ್ನು ನಿಸರ್ಗಾನುಸಾರಿ ಯಾಗಿ ಮಾಡಬೇಕು. ಸ್ವಾಭಾವಿಕ ಶಿಕ್ಷಣದಲ್ಲಿ ಮಗುವಿನ ಬೆಳವಣಿಗೆ ಕಾಡಿನ ಗಿಡಗಳ ಬೆಳವಣಿಗೆಯಂತೆ. ಶಾಲೆಯ ಶಿಕ್ಷಣದಲ್ಲಿ ಉದ್ಯಾನವೃಕ್ಷಗಳ ಪ್ರಮಾಣಬದ್ಧವಾದ ಬೆಳವಣಿಗೆ ಯಂತೆ.

**ಡಾ॥ ಎಡ್ವರ್ಡ್ ಡೇವಿಡ್ಸ :** ಮಗುವಿನ 'ಆಂತರಿಕ' ಪ್ರಪಂಚವನ್ನು ಕಟ್ಟಿ, ಅದನ್ನು ಬಾಹ್ಯ ಪ್ರಪಂಚದೊಡನೆ ಸರಿ ಸಮವಾಗಿ ಹೊಂದಿಕೊಳ್ಳುವಂತೆ ಮಾಡುವದು.

**ರಾಸ್ :** ಸ್ವಾಭಾವಿಕ ಬೆಳವಣಿಗೆಯಲ್ಲಿ ಉದ್ದಿಷ್ಟವಾದ, ವ್ಯತ್ಯಾಸಗಳನ್ನು ಸಾಧಿಸುವದೇ ಶಿಕ್ಷಣದ ಕಾರ್ಯ.

**ಸ್ವಾಮಿ ವಿವೇಕಾನಂದರು ;** Education must reach our people at the plough, in the factory, everywhere. ನೇಗಿಲದೊಡನೆ, ಕಾರ್ಖಾನೆಯ ಕೆಲಸ ದೊಡನೆ, ಅವರ ಎಲ್ಲ ಉದ್ಯೋಗಗಳೊಡನೆ ಶಿಕ್ಷಣವು ಸಮನ್ವಿತವಾಗಬೇಕು. ಗುರುಕುಲವಾಸವು ನಮ್ಮ ಶಿಕ್ಷಣ ಪದ್ಧತಿಯ ಅವಿಭಾಜ್ಯ ಅಂಗವಾಗಬೇಕು. ಶಿಕ್ಷಣದ ಪ್ರಭಾವ ದಿಂದ ಪಾಶ್ಚಾತ್ಯರ ಆಂತರಿಕ 'ಬ್ರಹ್ಮನು' ಜಾಗೃತನಾಗಿದ್ದಾನೆ. ಶಿಕ್ಷಣದ ಅಭಾವದಿಂದ ನಮ್ಮ ಜನರಲ್ಲಿಯ 'ಬ್ರಹ್ಮ'ನು ನಿಷ್ಕ್ರಿಯನಾಗಿದ್ದಾನೆ.

**ಡಾ॥ ರವೀಂದ್ರನಾಥ ಟಾಗೋರರು :** 'ತನ್ನ ಒಲವು ಶಕ್ತಿಗಳಿಗನುಗುಣವಾಗಿ ಮಗು ಸ್ವತಂತ್ರವಾಗಿ ಬೆಳೆಯಬೇಕು. ಬಾಲ್ಯವು ಆನಂದಮಯವಾಗಿರಬೇಕು. ಮಗು ಬೆಳೆದಂತೆ

ಸಮೃದ್ಧವಾದ ಸೃಷ್ಟಿಯೊಡನೆ ಸಮರಸವಾಗಬೇಕು. ಸೃಷ್ಟಿಯ ವಿವಿಧ ರೂಪಗಳಲ್ಲಿ ಅಡಗಿದ ಶಾಶ್ವತ ಸತ್ಯವನ್ನು ಅತನು ಕಾಣುವಂತಾಗಬೇಕು...'

**ಗಾಂಧೀಜಿ :** 'ಸಾಕ್ಷರತೆ ಶಿಕ್ಷಣದ ಗುರಿಯೂ ಅಗಿಲ್ಲ, ಪ್ರಾರಂಭವೂ ಕೂಡ ಆಗಿಲ್ಲ. ಅದೊಂದು ಸಾಧನ ಮಾತ್ರ. ವ್ಯಕ್ತಿಗಳಲ್ಲಿ ಹುದುಗಿರುವ ಉನ್ನತವಾದ ಅಂಶಗಳನ್ನೆಲ್ಲ ಹೊರ ತೆಗೆಯುವುದೇ ಶಿಕ್ಷಣದ ಉದ್ದೇಶವಾಗಿದೆ.'

'ಸ್ವತಂತ್ರ ಹಾಗೂ ಹೊಣೆಗಾರ ನಾಗರಿಕನನ್ನಾಗಿ ಮಾಡುವ ಮಗುವಿನ ಶಿಕ್ಷಣದಲ್ಲಿ ಬೌದ್ಧಿಕ ಸಿದ್ಧಿಗಳಿಂದಲೂ ಆಚರಣ ಶುದ್ಧಿಗೆ ಹೆಚ್ಚು ಪ್ರಾಧಾನ್ಯತೆ ನೀಡಬೇಕು. ಮಹಾ ಪುರುಷರ ಹಾಗೂ ಅವರ ಕೃತಿಗಳೊಡನೆ ಮಗುವಿಗೆ ನೇರವಾದ ಸಂಪರ್ಕವನ್ನು ತಂದುಕೊಡಬೇಕು' (ಡ್ಯೂಯಿ).

'ರಾಷ್ಟ್ರಗಳಲ್ಲಿ, ಜನಾಂಗಗಳಲ್ಲಿ ಧಾರ್ಮಿಕ ಪಂಗಡಗಳಲ್ಲಿ ತಿಳುವಳಿಕೆ, ಸಹಿಷ್ಣುತೆ ಹಾಗೂ ಸೌಹಾರ್ದತೆಗಳನ್ನು ಮಗುವಿನ ಮನಸ್ಸಿನಲ್ಲಿ ಸ್ಥಿರಗೊಳಿಸುವಂತೆ ಶಿಕ್ಷಣದ ಯೋಜನೆಯಾಗಬೇಕು. ಇದು ಮಾತ್ರವಲ್ಲದೆ ಶಾಂತಿಯನ್ನು ರಕ್ಷಿಸುವ ಸಂಯುಕ್ತ ರಾಷ್ಟ್ರ ಸಂಘವು ಕೈಗೊಳ್ಳುವ ಸಕಲ ಚಟುವಟಿಕೆಗಳನ್ನು ಮಗು ಮುನ್ನಡೆಸುವಂತಿರಬೇಕು.

'ಒಳ್ಳೇ ನೆರೆಹೊರೆಯವರಾಗಿ ಶಾಂತಿ-ಸೌಹಾರ್ದಗಳ ಜೀವನವನ್ನು ನಡೆಸಲು ಮಕ್ಕಳು ಪ್ರತಿಜ್ಞಾಬದ್ಧರಾಗಬೇಕು.. ಶಿಕ್ಷಣವಲ್ಲದೆ ಬೇರೆ ಯಾವುದೇ ಉಪಾಯವು ಈ ಉದ್ದೇಶವನ್ನು ಈಡೇರಿಸಲಾರದು.'—(Universal Declaration of Human Rights).

'We are a big nation and want to be bigger. We want to exercise our influence in the world. We need to use our greatest capital asset, our men and women, to the fullest possible extent. We must, therefore, offer them (children) first rate education.–Nothing else can do it.—(*Educational Planning*). (ನಮ್ಮದು ಘನತೆಗೇರಿದ ರಾಷ್ಟ್ರ. ನಮ್ಮ ಘನತೆಯನ್ನು ಇನ್ನೂ ಹೆಚ್ಚಿಗೆ ಬೆಳೆಸುವದು ನಮ್ಮ ಬಯಕೆಯಾಗಿದೆ. ಪ್ರಪಂಚದಲ್ಲಿ ನಮ್ಮ ಪ್ರಭಾವವನ್ನು ಬೀರಬೇಕೆಂಬುದು ನಮ್ಮ ಹವಣಿಕೆ. ನಮ್ಮ ರಾಷ್ಟ್ರದ ಸ್ತ್ರೀ ಪುರುಷರು ನಮಗೆ ಅತ್ಯಂತ ಹಿರಿದಾದ ಸಂಪತ್ತು ಹಾಗೂ ಬಂಡವಾಳ. ಈ ಸಂಪತ್ತಿನ ಅತ್ಯಧಿಕವಾದ ವಿನಿಯೋಗವನ್ನು ಮಾಡುವದು ನಮಗೆ ಅಗತ್ಯವಾಗಿದೆ. ಆದುದರಿಂದ ನಮ್ಮ ಮಕ್ಕಳಿಗೆ ಅತಿ ಶ್ರೇಷ್ಠಮಟ್ಟದ ಶಿಕ್ಷಣವನ್ನು ನಾವು ಕೊಡಲೇಬೇಕಾಗುವದು. ಶಿಕ್ಷಣವನ್ನುಳಿದು ಬೇರೆ ಯಾವುದರಿಂದಲೂ ಇದನ್ನು ಸಾಧಿಸಲಾರೆವು).

'Religious or moral education for the cultivation of essential moral and spiritual values should be emphasized' *(Central Government :— Attitude Formation).* (ಅತ್ಯವಶ್ಯವಾಗಿರುವ ನೈತಿಕ ಹಾಗೂ ಆಧ್ಯಾತ್ಮಿಕ ಮೌಲ್ಯಗಳನ್ನು ಮನದುಂಬಿಸಲು, ಧಾರ್ಮಿಕ ಹಾಗೂ ನೈತಿಕ ಶಿಕ್ಷಣಕ್ಕೆ ಪ್ರಾಧಾನ್ಯತೆ ದೊರೆಯಬೇಕು.)

Flight from established religion (as in France, then) can rescue the individual from

corruption ; but not a flight from religious belief. The neglect of all religion leads to the neglect of all duties —*Rousseau*. ('ಅಂದು' ಫ್ರಾನ್ಸ್‌ನಲ್ಲಿ ನೆಲಸಿದ ಡಂಬಾಚಾರದ, ಶ್ರದ್ಧಾವಿಹೀನವಾದ ಧರ್ಮದಿಂದ ಮಗುವನ್ನು ದೂರಿಡುವದು. ಅಧಃಪತನದಿಂದ ಆತನನ್ನು ರಕ್ಷಿಸಬಲ್ಲದು. ಆದರೆ ಸಂಪೂರ್ಣವಾದ ಧರ್ಮಶ್ರದ್ಧೆಯಿಂದ ಮಗುವನ್ನು ದೂರಿಕರಿಸುವದರಿಂದ, ಮಾನವೀಯವಾದ ಸಕಲ ಕರ್ತವ್ಯಗಳನ್ನೂ ಆತನು ದುರ್ಲಕ್ಷಿಸುವಂತೆ ಮಾಡಿದಂತಾಗುವದು.)

ಧಾರ್ಮಿಕ ಶಿಕ್ಷಣದಲ್ಲಿ ಒಂದು ಪ್ರಬಲವಾದ ಆತಂಕವು ತಲೆದೋರುವದು. ಭಾರತವು ಅನೇಕ ಧರ್ಮಗಳಿಗೆ, ಮತಪಂಥಗಳಿಗೆ ಆಸರವನ್ನಿತ್ತಿದೆ. ಧಾರ್ಮಿಕ ಶಿಕ್ಷಣದಲ್ಲಿ ಯಾವ ಧರ್ಮದ ದಾರಿಯನ್ನು ಮಗುವಿಗೆ ತೋರಿಸಬೇಕು ? ಯಾವ ಮತೀಯ ತತ್ವಗಳಿಗೆ ಮನ್ನಣೆಯನ್ನೀಯಬೇಕು ? ಇದೊಂದು ಬಿಡಿಸಲಾರದ ಸಮಸ್ಯೆಯಾಗುವದು. ವಿವಿಧ ಧರ್ಮಗಳು ಒಂದೇ ದೇಗುಲಕ್ಕೆ ಕರೆದೊಯ್ಯುವ ಬೇರೆ ದಾರಿಗಳಂತೆ, ಅವುಗಳಿಗೆಲ್ಲ ಮೂಲಭೂತವಾಗಿರುವ, ಯಾವುದೇ ಮತೀಯನ ಮನವು ನೊಂದುಕೊಳ್ಳದಂತಹ, ಸರ್ವ ಮಾನ್ಯ ಅಂಶಗಳನ್ನು ಎಳೆದು ಮಕ್ಕಳ ಮನಸ್ಸಿನಲ್ಲಿ ಸ್ಥಿರವಾಗಿ ಮೂಡಿಸಬಹುದು. ಆದ್ದರಿಂದ ಅವರು 'ಪಾಪಭೀರು' (god fearing) ಆಗುವರು; ಅಕೃತ್ಯಕ್ಕೆ ಹಿಂಜರಿಯುವರು. ಸ್ವಾರ್ಥಸ್ಪರ್ಧೆಗಳ ಇಂದಿನ ನಿರಂಕುಶ ಹಾವಳಿಯಲ್ಲಿ ಚಿಕ್ಕಂದಿನಲ್ಲಿಯೆ ಈ ಮನೋಭೂಮಿಕೆಯನ್ನು ಮನೆ ಹಾಗೂ ಶಾಲೆಗಳು ಬೆಳೆಸಿಕೊಂಡು ಬರುವದು ಅಗತ್ಯವಾಗಿದೆ.

ನೈತಿಕ ವಿಚಾರಗಳ ಪರಿಚಯುವನ್ನು ಮಕ್ಕಳಿಗೆ ಮೊದಲಿನಿಂದಲೂ ಮಾಡಿಕೊಡುವದು ಇಷ್ಟವಾದುದು. ನೀತಿಯು ಕೇವಲ 'ವಿಚಾರ'ವಾಗಿಲ್ಲ; 'ಆಚಾರ'ವಾಗಿದೆ. ನೀತಿಯು ಕೃತಿಯಲ್ಲಿ ವ್ಯಕ್ತವಾಗಬೇಕು. ಮಕ್ಕಳಿಗೆ ಏನಾದರೊಂದು ಆಶೆ– ಆಮಿಷಗಳನ್ನು ತೋರಿಸಿ ಅವರನ್ನು ನೈತಿಕ ಕಾರ್ಯದಲ್ಲಿ ತೊಡಗಿಸುವುದು ಹಿತಕರವಾದುದಲ್ಲ. ಆಶೆ ಆಮಿಷಗಳು ದೊರೆಯದಿದ್ದರೆ, ಇಲ್ಲವೆ ಆವು ತೀರದ ಕೂಡಲೆ ಅವರು ನೀತಿಯ ಮಾರ್ಗವನ್ನು ಬಿಟ್ಟುಕೊಡುವ ಸಂಭವ ಉಂಟು.

## 11, ಕುಟುಂಬದ ಪ್ರಭಾವ

ಮಗುವಿನ ಮುಂದಿನ ಜೀವನಕ್ಕೆ ಅವನು ಚಿಕ್ಕಂದಿನಲ್ಲಿ ಬೆಳೆದು ಬರುವ ಕುಟುಂಬವೆ ತಳಪದಿಯಾಗುವದು. ಮಗುವಿನ ಶೀಲ ಸಂವರ್ಧನೆಯಲ್ಲಿ, ಬುದ್ಧಿವಿಕಾಸದಲ್ಲಿ, ನಿರೋಗಿಯಾದ ಶರೀರರಚನೆಯಲ್ಲಿ ಕುಟುಂಬ ಜೀವನದ ಪ್ರಭಾವವೇ ಅತಿ ಮುಖ್ಯವಾದುದು. ಮಗುವಿನ ವಿಕಾಸದಲ್ಲಿ ಕುಟುಂಬವು ಎಂದೆಂದಿಗೂ ಅತ್ಯಂತ ಪ್ರಭಾವಶಾಲಿಯಾದ ಘಟಕವಾಗಿದೆ.

ಜೀವನರಂಗದಲ್ಲಿ ಕಾಲಿಟ್ಟ ಮಗು ಮೊದಲು ಎದುರಿಸಬೇಕಾದ ಸಮಾಜವು ಆತನ ಕುಟುಂಬ ಪರಿಸ್ಥಿತಿ ಹಾಗೂ ಪರಿಸರಗಳ ಪ್ರಭಾವವು ವ್ಯಕ್ತಿ ವಿಕಾಸದಲ್ಲಿ ಅತ್ಯಂತ ಪರಿಣಾಮಕಾರಿಯಾದುದು. ಕುಟುಂಬದಲ್ಲಿಯ ವಸ್ತುಗಳು, ವ್ಯಕ್ತಿಗಳು, ಮಗುವಿಗೆ ಎಲ್ಲವೂ ಹೊಸದು. ಅನುಕರಣವೃತ್ತಿಯು ಆತನಲ್ಲಿ ತುಂಬಾ ಜಾಗೃತವಾಗಿರುತ್ತದೆ. ಅನುಕರಣಕ್ಕೆ ಅಂದು ಕುಟುಂಬವೇ ಆದರ್ಶ. ಕುಟುಂಬದ ಪರಿಸ್ಥಿತಿಯ ಮೇರೆಗೆ ಈ ಆದರ್ಶವು ಸಾಧು ಇಲ್ಲವೆ ಅಸಾಧು ಆಗಬಹುದು. ಶೈಶವದಲ್ಲಿ

ತಾಯಿತಂದೆಗಳೆ ಮಗುವಿಗೆ ಅನುಕರಣಕ್ಕೆ ಆದರ್ಶವಾಗುವರು. 'ತಂದೆಯಂತೆ ಮಗು' ಎಂಬುವದು ಕೇವಲ ಶರೀರದ ಹೋಲಿಕೆಯಾಗಿಲ್ಲ. ತಂದೆಯು ಮಗುವಿಗೆ ಒಳ್ಳೆ ಆದರ್ಶವನ್ನೊದಗಿಸಿದರೆ, 'ಅಪ್ಪ ಕಟ್ಟಿಸಿದ ಗುಡಿಗೆ ಮಗನು ಕಳಸವನ್ನೇರಿಸಬಹುದು'. ಇದಕ್ಕೆ ಪ್ರತಿಯಾಗಿ ತಂದೆಯ ಆದರ್ಶವೆ ಹೀನವಾಗಿದ್ದರೆ, ತಂದೆಯ ದೋಷಗಳನ್ನೇ ಆತನು ಇಮ್ಮಡಿಯಾಗಿ ತನ್ನಲ್ಲಿ ಬೆಳೆಸಿಕೊಳ್ಳಬಹುದು.

ತಾಯಿಯ ಪ್ರಭಾವವು ತಂದೆಗಿಂತಲೂ ಹೆಚ್ಚು ಶಕ್ತಿಯುತವಾದುದು. ಶೈಶವದಲ್ಲಿ ತನ್ನ ತಾಯಿಯ ಸಹವಾಸದಲ್ಲಿಯೆ ಮಗು ಹೆಚ್ಚು ಸಮಯವನ್ನು ಕಳೆಯುವುದು. ಸುಸಂಸ್ಕೃತಳಾದ ತಾಯಿಯು ತನ್ನ ನಡೆ ನುಡಿಗಳೆಲ್ಲ ಮಗುವಿಗೆ ಒಳ್ಳೆ ಮಾದರಿಯಾಗುವಂತೆ ನೋಡಿಕೊಳ್ಳುವಳು. ಇದಕ್ಕೆ ಪ್ರತಿಯಾಗಿ ಮಕ್ಕಳ ಮನೋಧರ್ಮವನ್ನರಿಯದ ಮಾತೆ ತನ್ನ ಮಗುವಿನ ಮುಂದಿನ ಜೀವನವನ್ನು ಹಾಳುಗೆಡಹಬಹುದು. ತಾಯಿತಂದೆಗಳಂತೆಯೆ, ಕುಟುಂಬದಲ್ಲಿರುವ ಉಳಿದವರು ಕೂಡ ಮಗುವಿನ ಮನೋಭೂಮಿಕೆಯ ಮೇಲೆ ತಿಳಿದು ತಿಳಿಯದೆಯೆ ತಮ್ಮ ಪ್ರಭಾವವನ್ನು ಬೀರಬಹುದು.

ಎಳೆಯ ವಯಸ್ಸಿನಲ್ಲಿ ತಾಯಿಯಿಂದ ಪಡೆದ ಸಂಸ್ಕಾರದಿಂದ ತಮ್ಮ ಜೀವನವನ್ನು ಉನ್ನತಗೊಳಿಸಿದ ಉದಾಹರಣೆಗಳನ್ನು ಎಷ್ಟೋ ಮಹಾಪುರುಷರ ಜೀವನಚರಿತ್ರೆಯಲ್ಲಿ ನಾವು ಕಾಣುವೆವು. ಶಿವಛತ್ರಪತಿಯಲ್ಲಿ ಸ್ವಾತಂತ್ರ್ಯ ಸ್ವರಾಜ್ಯಗಳ ಕನಸುಕಟ್ಟಿದವಳು ಆತನ ತಾಯಿ. ಮಹಾಸೇನಾನಿಯಾದ ನೆಪೋಲಿಯನ್‌ನು ತನ್ನ ಮಹೋನ್ನತ ಸಾಧನೆಗಳೆಲ್ಲಕ್ಕೂ

ತಾಯಿ ಪ್ರೇರಕಳೆಂದು ಸಾರಿರುವನು. ತನ್ನ ಉನ್ನತ ಧ್ಯೇಯಂಗಳಿಗೆ ತಾಯಿಯ ಬೋಧನೆಯೇ ಪ್ರೇರಕವೆಂದು ಲಿಂಕನ್‌ನು ಹೇಳಿರುವನು. ಅಹಿಂಸೆ ಹಾಗೂ ಆಸ್ತಿಕ್ಯ ಭಾವನೆಗಳು ಗಾಂಧೀಜಿಯವರ ಜೀವನದಲ್ಲಿ ಅಮರವಾಗಿ ನೆಲೆಸಿದುದು ತಾಯಿಯ ಪ್ರಭಾವದಿಂದಲೆ. ತಾಯಿಯ ಮಮತೆ ತರಬೇತಿಗಳೆ ತಮ್ಮನ್ನು ಉನ್ನತ ಸ್ಥಾನಕ್ಕೇರಿಸಿದ ಮೊದಲು ಮೆಟ್ಟಲುಗಳೆಂದು ಅನೇಕ ಮಹಾಪುರುಷರು ಪ್ರಾಂಜಲವಾಗಿ ಒಪ್ಪಿಕೊಂಡಿರುವರು. ತಾಯಿಗೆ ತಮ್ಮ ಕೃತಜ್ಞತೆಗಳನ್ನು ಸಲ್ಲಿಸಿರುವರು. ಸಹಕಾರ ಸಹಾನುಭೂತಿ, ಸ್ವಸುಖತ್ಯಾಗ ಮುಂತಾದ ಸಾಮಾಜಿಕ ಸದ್ಗುಣಗಳ ಬೇರುಗಳು ಕುಟುಂಬದ ಜೀವನಕ್ರಮ ಹಾಗೂ ಸಂಸ್ಕೃತಿಗಳಲ್ಲಿ ಆಳವಾಗಿ ಒಳಸೇರಿರುವವು. ಒಂದೊಂದು ಸಾಮಾಜಿಕ ಮಟ್ಟದಲ್ಲಿಯ ಜೀವನಕ್ರಮವು ಒಡೆದು ಕಾಣಬರುವಷ್ಟು ಭಿನ್ನವಾಗಿದೆ – ನಡೆನುಡಿಗಳಲ್ಲಿ ಜೀವನದ ಈ ವಿವಿಧತೆಗೆ ಆರ್ಥಿಕ ವಿಷಮತೆಯೂ ಒಂದು ಮಹತ್ವದ ಕಾರಣ. ಶ್ರಮಜೀವಿಗಳ ಕೆಳಮಟ್ಟದ ಕುಟುಂಬಗಳಲ್ಲಿ ಮಕ್ಕಳಿಗೆ ಸತ್ವಯುತವಾದ ಆಹಾರವಿಲ್ಲ. ಮೈತುಂಬ ಬಟ್ಟೆಯಿಲ್ಲ. ಮನೆಯೆಂಬ ಹೆಸರಿಗೂ ಪಾತ್ರವೆನಿಸಿದ ಆಸರ. ಹೊಗೆ, ಧೂಳು, ತೇವ, ಕತ್ತಲೆಗಳಿಗೆ ಆಗರವಾದುದು. ಇಂಥ ಕುಟುಂಬಗಳಲ್ಲಿ ಮಗು ನಿತ್ಯವೂ ಅನುಭವಿಸುವುದು ಎಲ್ಲ ಬಗೆಯ ಕೊರತೆ, ಕೇಳುವುದು ಅಸಭ್ಯ ನುಡಿಗಳನ್ನು, ನಿರೀಕ್ಷಿಸುವದು ನಿತ್ಯವಾದ ಹೋರಾಟ, ಕಲಹ ಹಾಗೂ ಅಶಾಂತಿಗಳನ್ನು. ಈ ಬಗೆಯ ಅನಿಷ್ಟತರವಾದ ಆರ್ಥಿಕ-ಸಾಮಾಜಿಕ ಪರಿಸರಗಳಲ್ಲಿ, ಸನ್ನಿವೇಶಗಳಲ್ಲಿ ಮಗು ಹೇಗೆ ಸಮರ್ಪಕವಾಗಿ ಬೆಳೆಯಬೇಕು ? ಇಂಥ

ಮಗುವಿನ ಆಸ್ಥೆ ಅಭಿರುಚಿಗಳು ಕೀಳಾದರೆ, ಭಾಷೆ ಕೆಳತರಗತಿಯ ದ್ದಾದರೆ ಅದು ಸೋಜಿಗವೆನಿಸದು.

ಸಂವೇದನಾತ್ಮಕ ಶೈಶವದಲ್ಲಿ ಮಗುವಿಗೆ ಸರಿಯಾದ ಸಂಸ್ಕಾರವನ್ನು ಹಾಕಿಕೊಡುವ ಹೊಣೆಯು ಹೆಚ್ಚಾಗಿ ತಾಯಿ ತಂದೆಗಳದೇ ಆಗಿರುವದೆಂದು ರೂಸೋ ಬಲವಾಗಿ ಪ್ರತಿಪಾದಿಸಿರುವನು.

## 12. ತಂದೆ ತಾಯಿಗಳಿಗೆ ಉಪಯುಕ್ತ ಸಲಹೆಗಳು

ತಂದೆತಾಯಿಗಳಿಗೆ ರೂಸೋವಿನ ಮೊದಲನೆಯ ಸಲಹೆಯೆಂದರೆ – 'Don't give the child anthing he demands, but what he needs' - ಆತನು ಜೋರಾಗಿ ಬೇಡುವನೆಂದು ಮಗುವಿಗೆ ಏನನ್ನೂ ಕೊಡಬೇಡಿ. ಆತನಿಗೆ ಅಗತ್ಯವಾದುದನ್ನು ಮಾತ್ರ ಕೊಡಿ. ಈ ಸರಳವಾದ ಸಲಹೆ ಎಷ್ಟೊಂದು ಮಾನಸಿಕ ದೋಷಗಳಿಂದ ಮಕ್ಕಳನ್ನು ದೂರವಿಡಬಹುದು. ಹಟಮಾರಿತನಕ್ಕೆ ಎಳಸುವದು; ಅತಿ ಪ್ರೀತಿಯಿಂದ (spoilt child) ಆಗಿ ಅವರನ್ನು ಕೆಡಿಸುವದು. '...by enduring mild pains without fear, one learns by degrees to be able to bear severe ones.' – ಮಗುವಿಗೆ ತುಸು ಪೆಟ್ಟುತಾಗಿದರಾಯಿತು. 'ಮಗೂ ಏನು ಮಾಡಿಕೊಂಡೆ! ಅಯ್ಯೋ ಹೇಗೆ ಮಾಡಲಿ ?' ಎಂದು ತಾವು ಗಾಬರಿಯಾಗದೆ, ಮಗುವನ್ನೂ ಗಾಬರಿಗೊಳಿಸಬಾರದು. ಎಳೆಯತನದಲ್ಲಿಯೆ ಚಿಕ್ಕ ಪುಟ್ಟ ಬೇನೆ ಬಳಲಿಕೆಗಳನ್ನು ತಾಳಿಕೊಳ್ಳಲು ಮಗು ಕಲಿಯಬೇಕು. ಅಂದರೆ ಮುಂದಿನ ಸಮಗ್ರ ಜೀವನದಲ್ಲಿ ಒದಗಬಹುದಾದ ಕಷ್ಟಕಾರ್ಪಣ್ಯಗಳನ್ನು

ಸಹಿಸಲು ಅದು ಶಕ್ತವಾಗುವದು. ಶೈಶವದಲ್ಲಿ ಮಗುವಿನ ಕೂಡ ತರ್ಕವಾದ ಮಾಡಬಾರದು. ಏಕೆಂದರೆ 'Childhood is the sleep of reason'. (ಶೈಶವದಲ್ಲಿ ತರ್ಕಶಕ್ತಿಯು ಸುಪ್ತಾವಸ್ಥೆಯಲ್ಲಿ ಇರುವುದು). 'To live is the trade I wish to teach' (ಮಗುವಿಗೆ 'ಹೇಗೆ ಬಾಳಬೇಕು' ಎಂಬ ವೃತ್ತಿಯನ್ನು ಕಲಿಸುವುದೇ ನನ್ನ ಬಯಕೆ). ಇದರ ಜೊತೆಗೆ ಉಳಿದವರೊಡನೆ ಕೂಡಿಕೊಂಡು ಹೇಗೆ ಬಾಳಬೇಕೆಂಬುದನ್ನೂ ಮಗು ಅರಿತು ಕೊಳ್ಳಬೇಕು. 'ವಸಂತಿ ನೀಡೇಷು ಸುಖಂ ಪತತ್ರಿಣಃ ಪರಸ್ಪರ ಸ್ನೇಹಸಿಬದ್ಧ ಚಿತ್ತಾಃ'—ಒಂದೇ ಗಿಡದಲ್ಲಿ ಉಳಿದವರೊಡನೆ ಸ್ನೇಹಭಾವದಿಂದ ಯುಕ್ತರಾಗಿ ನೂರೆಂಟು ಗೂಡುಗಳಲ್ಲಿ ಪಕ್ಷಿಗಳು ಸುಖವಾಗಿ ಜೀವಿಸುವವು–ಎಳೆಯತನದಲ್ಲಿಯೆ ಈ ಸದ್ಭಾವನೆಯನ್ನು ಮಕ್ಕಳ ಮನಸ್ಸಿನಲ್ಲಿ ಮೂಡಿಸಿ, ಬೆಳೆಸಿ ಕೊಂಡು ಬರಬೇಕು. ಅಂದರೆ, ಇಂದು ಎಲ್ಲ ಕಡೆಗೆ ಕಂಡು ಬರುವ ಕಲಹ ಕ್ರೂರತೆಗಳಿಗೆ ತಡೆ ಹಾಕಬಹುದು.

ತಮ್ಮ ಮಕ್ಕಳು ಹೇಳುವ 'ಹುಚ್ಚು-ಹುಚ್ಚು, ಅಡ್ಡ ತಿಡ್ಡ' ಪ್ರಶ್ನೆಗಳಿಗೆ ತಂದೆತಾಯಿಗಳು ಅಷ್ಟೇ ಹುಚ್ಚು-ಹುಚ್ಚು, ಅಡ್ಡತಿಡ್ಡ ಉತ್ತರಗಳನ್ನು ಕೊಟ್ಟು ತೃಪ್ತರಾಗುವದುಂಟು. ಅದರಿಂದ ಮಕ್ಕಳನ್ನು ಅಡ್ಡದಾರಿಗೆ ಹಚ್ಚಿದಂತಾಗುವುದು. ಇದ್ದುದನ್ನು ಇದ್ದಂತೆಯೆ ನೇರವಾಗಿ, ನಿರ್ಣೀತವಾಗಿ ಹೇಳಿ ಬಿಡುವುದು ಲೇಸು.

ಸಿರಿವಂತಿಕೆ, ಬಡತನ, ಸ್ಥಾನಮಾನಗಳ ಹೆಚ್ಚು ಕಡಿಮೆ– ಇವುಗಳಿಂದ ಮೇಲು ಕೀಳೆಂಬ ಭಾವನೆಯು ಎಂದಿಗೂ ಉಂಟಾಗದಂತೆ, ಮಗುವನ್ನು ದಕ್ಷತೆಯಿಂದ ರಕ್ಷಿಸಬೇಕು.

ಈ ಭಾವನೆಯು ಅಸಂತೋಷಕ್ಕೆ, ಒಳಜಗಳಗಳಿಗೆ ಕಾರಣವಾಗು ವದು. ಈ ಸಂದರ್ಭದಲ್ಲಿ ರೂಸೋ ಕೊಡುವ ಉದಾಹ ರಣೆಯು ಒಳ್ಳೆ ಮಾರ್ಮಿಕವಾಗಿದೆ : 'A rich man's belly is not bigger than that of his slave'– (ಶ್ರೀಮಂತನ ಹೊಟ್ಟೆಯು ಆತನ ಗುಲಾಮನ ಹೊಟ್ಟೆಗಿಂತಲೂ ಗಾತ್ರದಲ್ಲಿ ದೊಡ್ಡದಾಗಿರುವುದಿಲ್ಲ).

ಮಗು ಜೀವನೋಪಯೋಗಿಯಾಗಿರುವ ಒಂದು ಕಾಯಕ ವನ್ನು ಕೈಗೊಳ್ಳಬೇಕು. 'ಕೈಕೆಸರಾದರೆ ಬಾಯಿ ಮೊಸರು' ಆಗುವುದಲ್ಲವೇ ?–'Rich or poor, strong or weak, every idle citizen is a thief'. (ಬಡವ-ಬಲ್ಲಿದ, ಬಲಿಷ್ಠ-ದುರ್ಬಲ...) ಹೇಗೇ ಇರಲಿ, ಉದ್ಯೋಗವನ್ನು ಮಾಡದಂವ ನಾಗ ರಿಕರನ್ನು ಕಳ್ಳನೆಂದೇ ತಿಳಿಯಬೇಕು). ಸಮಾಜದಲ್ಲಿ ಉಳಿದವ ರಿಂದ ತಾನು ಪಡೆಯುವ ಉಪಕಾರಕ್ಕೆ, ಸಮಾಜೋಪಯೋಗಿ ಯಾದ ಕಾಯಕದಿಂದಲೆ ಮಗು ತನ್ನ ಸೇವೆಯನ್ನು ಸಲ್ಲಿಸಬೇಕು. **ಟಾಲಸ್ಟಾಯ್, ಟಾಗೋರ್, ಗಾಂಧೀಜಿ** ಮುಂತಾದ ಮಹಾತ್ಮ ಹಿತ್ತೈಷಿಗಳು ಈ ಸಿದ್ಧಾಂತವನ್ನೇ ಎತ್ತಿ ಹಿಡಿದಿದ್ದಾರೆ. 'It is through the doing of the good that we are made good'. (ಸತ್ಕೃತಿಗಳನ್ನು ಮಾಡುವುದರಿಂದಲೆ ನಾವು ಸಜ್ಜನ ರಾಗುವೆವು. ಅದಕ್ಕಿಂತಲೂ ಹೆಚ್ಚು ನಿಶ್ಚಿತವಾದ ಮಾರ್ಗ ಬೇರೊಂದಿಲ್ಲ. ಎಂದು **ರೂಸೋನ** ಹೇಳಿಕೆ.) 'You learn fair game by playing fair game'. –ನ್ಯಾಯವಾಗಿ ಆಟ ವಾಡುವುದರಿಂದಲೆ, ನ್ಯಾಯವಾದ ಆಟವನ್ನು ಕಲಿಯುವಿರಿ– ಎನ್ನುವ **ಬ್ರೂಬೇಕರ್** ರವರ ಹೇಳಿಕೆಯೂ ಒಂದೇ ಸಿದ್ಧಾಂತ ವನ್ನು ಸೂಚಿಸುವವು. ಚಿಕ್ಕಂದಿನಿಂದಲೆ ಒಂದು ಒಳ್ಳೇ ಕಾಯಕ

ದಲ್ಲಿ ತೊಡಗಿದ ಮಗುವಿಗೆ ಕಾಯಕದಲ್ಲಿ ಮೇಲು ಕೀಳೆಂಬ ಕಲ್ಪನೆಯು ಉಂಟಾಗುವುದಿಲ್ಲ. ಮಗುವಿಗೆ ಶ್ರಮಗೌರವವು ತಿಳಿಯುವೆಯ ರೂಢವಾಗುವುದು. 'A useless citizen is a dangerous thief'. ಯಾರಿಗೂ ಉಪಯೋಗವಾಗದ ನಾಗರಿಕನು ಗಂಡಾಂತರಕಾರಿ– ಎನ್ನುವ ರೂಸೋನ ಇನ್ನೊಂದು ಉಕ್ತಿಯೂ ಉದ್ಯೋಗದ ಮಹಿಮೆಯನ್ನೇ ಇನ್ನಷ್ಟು ಎತ್ತಿ ತೋರಿಸುವುದು.

ಮಗುವಿಗೆ ತಾಯಿತಂದೆಗಳೆ ಮೊದಲ ಶಿಕ್ಷಕರು. 'ತೊಟ್ಟಿಲು ತೂಗುವ ಮಾತೆ ಜಗವನುದ್ಧರಿಪಳಾಕೆ' ಎಂಬುದ ರಲ್ಲಿ ಇದೇ ಸಂಗತಿಯೇ ಅಡಕವಾಗಿದೆ. ಶೈಶವದಲ್ಲಿ ಮಗುವಿಗೆ ತಾಯಿಯ ಮಮತೆ - ಆರೈಕೆಗಳೇ ಅತನ ಸಮರ್ಪಕವಾದ ವಿಕಾಸಕ್ಕೆ ಆಗತ್ಯವಾದವುಗಳು. ಮಗುವಿಗೆ ಇವು ಸಮ ಯೋಚಿತವಾಗಿ ದೊರೆಯದಿದ್ದರೆ, ಆತನ ವಿಕಾಸಕ್ಕೆ ವ್ಯತ್ಯಯ ಉಂಟಾಗಬಹುದು. ತಾಯಿತಂದೆಗಳ ಬಗ್ಗೆ ಆತನಿಗೆ ಅಸಡ್ಡೆಯೂ ಉಂಟಾಗಬಹುದು.

'A judicious, though ignorant father may educate his son more than the cleverest teacher'. (ತಂದೆಯು ಅಜ್ಞಾನಿಯಾಗಿರಬಹುದು. ಆದರೆ ಆತನು ವಿವೇಕಿ ಯಾಗಿದ್ದರೆ, ಅತಿನಿಷ್ಣಾತ ಶಿಕ್ಷಕನಿಗಿಂತಲೂ ಹೆಚ್ಚು ಚೆನ್ನಾಗಿ ಕಲಿಸಬಲ್ಲನು). 'A child will be better brought up by a wise, limited father'. ತಂದೆಯ ಪಾಂಡಿತ್ಯವು ಸೀಮಿತವಾಗಿರಬಹುದು. ಆದರೆ ಆತನು ಬುದ್ಧಿವಂತನಾಗಿದ್ದರೆ ತನ್ನ ಮಗುವನ್ನು ಬೇರೆ ಯಾರಿಗಿಂತಲೂ ಹೆಚ್ಚು ಚೆನ್ನಾಗಿ ಬೆಳೆಸಿಕೊಂಡು ಬರಬಲ್ಲನು. 'Who can educate the

child ?' –(ಮಗುವಿಗೆ ಯಾರು ಶಿಕ್ಷಣವನ್ನು ಕೊಡಬಲ್ಲರು ?) ಎಂಬ ತಂದೆಯ ಪ್ರಶ್ನೆಗೆ ರೂಸೋನ ಜೋರಾದ ಉತ್ತರ :: 'You ! yourself'-(ನೀನೇ ಬೇರೆಯವರಲ್ಲ.)

ಈ ಹೇಳಿಕೆಗಳಲ್ಲಿ ತುಸು ಅತಿಶಯೋಕ್ತಿಯು ಬೆರೆತು ಕೊಂಡಿದ್ದರೂ, ಅವುಗಳಿಗೆ ಆಧಾರವಾದ ಮುಖ್ಯ ಭಾವನೆ ಯೆಂದರೆ, ತಂದೆಯ ಪ್ರೀತಿಯು ಉಳಿದವರಲ್ಲಿ ಬಾರದು. ತಂದೆ ಬಯಸುವಷ್ಟು ಮಗುವಿನ ಕಲ್ಯಾಣವನ್ನು ಬೇರೆ ಯಾರೂ ಬಯಸಲಾರರು. 'ಅಳಿಯನ ಕೂಡ ಊಟ ಮಾಡಬೇಕು, ಮಗನ ಕೂಡ ಶಿಕ್ಷಣ ಪಡೆಯಬೇಕು ? ಎಂಬುದೊಂದು ಲೋಕೋಕ್ತಿ ಇದೆ. ಅಳಿಯನಿಗೆ ಅತ್ತೆಯು ಅಡುಗೆಯಲ್ಲಿ ಉತ್ತಮವಾದುದನ್ನು ನೀಡುವಳು. ತಂದೆ ತನ್ನ ಮಗನಿಗೆ ತನಗೆ ತಿಳಿದುವರಲ್ಲಿ ಉತ್ತಮವಾದುದೆಲ್ಲವನ್ನೂ ಹೇಳಿಕೊಡುವ ಶ್ರದ್ಧೆಯೆ ಈ ಮಾತಿಗೆ ನೆಲೆಯಾಗಿದೆ.

ತಾಯಿ ತಂದೆಗಳು ಅಗತ್ಯವಾಗಿ ಇನ್ನೊಂದು ಮಹತ್ವದ ಮಾತನ್ನು ನೆನಪಿನಲ್ಲಿ ಇಟ್ಟುಕೊಳ್ಳಬೇಕೆಂದು ಮಹಾನುಭಾವ ರೊಬ್ಬರು ಹೇಳಿದ್ದಾರೆ: 'The highest riches parents can bestow upon their children is their company'. (ತಾಯಿ ತಂದೆಗಳು ತಮ್ಮ ಮಕ್ಕಳಿಗೆ ಕೊಡಬಹುದಾದ ಅತಿ ಶ್ರೇಷ್ಠ ಸಂಪತ್ತೆಂದರೆ, ತಮ್ಮ ಸಹವಾಸ). ಮಕ್ಕಳ 'ಪೀಡೆ' ತಪ್ಪಿಸಿಕೊಳ್ಳಲು ಅವರನ್ನು ಶಾಲೆಗೆ ಅಟ್ಟಿದರಾಯಿತು. ತಮ್ಮ ಕಾರ್ಯ ಮುಗಿಯಿತು. ಈ ತಪ್ಪು ತಿಳಿವಳಿಕೆಯು ತೊಲಗ ಬೇಕು. ತಾಯಿ ತಂದೆಗಳು ರಾಷ್ಟ್ರಕ್ಕೆ ನೀಡಬೇಕಾದ ಉತ್ತಮ ಕಾಣಿಕೆಯೆಂದರೆ—ಸುಶಿಕ್ಷಿತರಾದ, ಸುಸಂಸ್ಕೃತರಾದ ನಾಗರಿಕರು.

ಮಕ್ಕಳ ಸಹವಾಸದಲ್ಲಿ ಅವರು ಸಂತೋಷ ಪಡಬೇಕು. ತಮ್ಮಲ್ಲಿ ಉತ್ತಮವಾದುದೆಲ್ಲವನ್ನೂ ಅವರು ಅನುಕರಿಸು ವಂತಾಗಬೇಕು.

ಶಿಕ್ಷಕನ ಪಾತ್ರತೆಯ ಸಂದರ್ಭದಲ್ಲಿ ಶಿಕ್ಷಣವೇತ್ತರೊಬ್ಬರು ಒಂದು ಮಾತನ್ನು ಹೇಳಿರುವರು–'ಮಕ್ಕಳ ಬಗ್ಗೆ ನೈಜವಾದ ಪ್ರೀತಿ ಸಹಾನುಭೂತಿಗಳಿಲ್ಲದವನು ಶಿಕ್ಷಕನ ವೃತ್ತಿಗೆ ಅನರ್ಹನು. ಅಂಥವನು ಬೇರೊಂದು ವೃತ್ತಿಯನ್ನು ಕೈಗೊಳ್ಳಬೇಕು.' ಮಕ್ಕಳ ಕೂಡ ಹೇಗೆ ನಡೆದುಕೊಳ್ಳಬೇಕೆಂಬುದನ್ನು ಈ ಮಾತು ಬಹು ಚೆನ್ನಾಗಿ ವ್ಯಕ್ತಗೊಳಿಸುವುದು. ರೂಸೋ ಇದೇ ಸಂಗತಿಯನ್ನೆ ಹೆಚ್ಚು ಮಾರ್ಮಿಕವಾಗಿ, ಹೆಚ್ಚು ವಿಶದವಾಗಿ ಹೇಳಿರುವನು : One good means of preserving the innocence of children–it is that–all those who surround him respect and love him. (ಮಕ್ಕಳ ನಿಷ್ಪಾಪತೆಯನ್ನು ಉಳಿಸಿಕೊಳ್ಳಲು ಒಂದೇ ಉತ್ತಮವಾದ ಉಪಾಯವಿದೆ. ಅದೆಂದರೆ–ಮಗುವಿನ ಪರಿವಾರದವರೆಲ್ಲರೂ ಆತನನ್ನು ಆದರಿಸಬೇಕು, ಪ್ರೀತಿಸಬೇಕು).

ಇವೆಲ್ಲ ಸಲಹೆಗಳ ಸಾರವು ರೂಸೋನ ಒಂದೇ ಉದ್ಗಾರ ದಲ್ಲಿ ತುಂಬಿದೆ :– 'Oh, men ! be humane. It is your foremost duty :—Love childhood. Encourage its sports, its pleasures and its amiable instincts'– (ಮಾನವರೆ, ಅಂತಃಕರುಣೆಗಳಾಗಿರಿ. ಅದು ನಿಮ್ಮ ಆದ್ಯಕರ್ತವ್ಯವಾಗಿದೆ, ಶೈಶವವನ್ನು, ಮಕ್ಕಳನ್ನು ಪ್ರೀತಿಸಿರಿ. ಮಗುವಿನ ಆಟಪಾಟಗಳನ್ನು, ಆತನಿಗೆ ಆನಂದ

ದಾಯಕವಾದ ಸಂಗತಿಗಳನ್ನು ಹಾಗೂ ಸಾಧುವಾಗಿರುವ ಆತನ ಸಹಜ ಪ್ರವೃತ್ತಿಗಳನ್ನು ಪ್ರೋತ್ಸಾಹಿಸಿರಿ).

## 13. ನೂತನ ಸಮಾಜ ನಿರ್ಮಾಣಕ್ಕೆ ಮಗುವೇ ತಳಪಾಯ

ವಿಜ್ಞಾನವು ನಾಗಾಲೋಟದಿಂದ ಮುನ್ನಡೆಯುತ್ತಿದೆ. ದಿನಬೆಳಗಾದರೆ ವಿಜ್ಞಾನದ ನೂತನ ಕಾಣಿಕೆಗಳ ಬೆರಗುಗೊಳಿಸುವಂತಿವೆ. ಮಾನವನ ಜ್ಞಾನದ ಹಂಬಲ ಪೃಥ್ವಿಯ ಮೇರೆಯನ್ನು ಮೀರಿ ನಿಂತಿದೆ; ಆಕಾಶದ ಎತ್ತರ ನೆಗೆದಿದೆ. ಇದುವರೆಗೆ–ಚಂದ್ರನನ್ನು ಬೇಡಿ ಹಟ ಮಾಡುವುದು, ಎಂಬುದು ದೊರಕಿಸಲು ಅಸಾಧ್ಯವಾದ ಸಂಗತಿಯ ಸಂಕೇತವಾಗಿತ್ತು. ಇಂದಂ ಆ ಸಂಕೇತವನ್ನು ಬಿಟ್ಟುಕೊಡಬೇಕಾಗಿದೆ. ಚಂದ್ರಲೋಕಕ್ಕೆ ರಹದಾರಿಯಾಗಿದೆ. ಗಗನ ಯಾತ್ರಿಕರು ಅಲ್ಲಿಗೆ ಹೋಗಿ ಬರುತ್ತಿದ್ದಾರೆ. ಮಂಗಳ ಗ್ರಹವು ಮಾನವನ ಬರುವಿಕೆಗಾಗಿ ದಾರಿ ಕಾಯುತ್ತಿದೆ. ಉಳಿದ ಗ್ರಹಗಳೊಡನೆಯೂ ಮಾನವನು ಸಂಪರ್ಕ ಬೆಳೆಸಿದ್ದಾನೆ. ಆಕಾಶವಾಣಿ, ಚಿತ್ರವಾಣಿಗಳ ನೆರವಿನಿಂದ ಮಗುವಿನ ಜ್ಞಾನದ ಕ್ಷಿತಿಜವು ವಿಶಾಲವಾಗುತ್ತಲಿದೆ. ಅರ್ಧಶತಮಾನದ ಹಿಂದಿನ ಮಗುವಿಗಿಂತಲೂ ಇಂದಿನ ಅದೇ ವಯೋಮಾನದ ಮಗುವಿನ ಸಾಮಾನ್ಯಜ್ಞಾನವು ಎಷ್ಟೋಪಟ್ಟು ಹೆಚ್ಚಿದೆ.

‘ನಮ್ಮಷ್ಟಕ್ಕೆ ನಾವು, ನಿಮ್ಮಷ್ಟಕ್ಕೆ ನೀವು’—ಎನ್ನುವ ಪರಂಪರೆಯ ಪ್ರವೃತ್ತಿಯು ಇಂದಿನ ಮಗುವಿನ ಜೀವನಕ್ಕೆ ಸರಿಹೊಂದಲಾರದು. ‘ನಾವು–ನೀವು, ನಮ್ಮದು–ನಿಮ್ಮದು’ ಎಂದು ಮಾನವನೇ ಕಟ್ಟಿಕೊಂಡಿರುವ ಕೃತಕಗೋಡೆಗಳು ಇಂದು ಕುಸಿಯತೊಡಗಿವೆ. ದ್ರುತಗತಿಯ ಸಾರಿಗೆ ಸಂಪರ್ಕ ಸಾಧನ

ಗಳಿಂದ, 'ಜಗತ್ತು ಸಂಕುಚಿತವಾಗಿದೆ' ಎಂದು ಹೇಳುವ ಮಾತಿನಲ್ಲಿ ಸತ್ಯಾಂಶವಿದೆ. 'ಓಡುವ ಜೀವನ'ದೊಡನೆ ಬೆಳೆಯುವ ಮಗು ಕೂಡ ಸಮನಾಗಿ ಹೆಜ್ಜೆ ಹಾಕಬೇಕಾಗುವುದು. ಇಲ್ಲವಾದರೆ ಜೀವನಸ್ಪರ್ಧೆಯಲ್ಲಿ ಮಗು ಹಿಂದೆ ಬೀಳುವುದು.

ಮಗು ಹಿಂದೆ ಉಳಿದರೆ ಸಮಾಜವು ಮುನ್ನಡೆಯಲಾರದು. ರಾಷ್ಟ್ರದ ಪ್ರಗತಿಗೆ ಅಡೆತಡೆಯುಂಟಾಗುವುದು. 'ಇಂದಿನ ಮಕ್ಕಳೆ ನಾಳಿನ ನಾಗರಿಕ'ರಲ್ಲವೆ? ಈ ಮಾತು ಎಲ್ಲರ ನಾಲಿಗೆಯ ತುದಿಯಲ್ಲಿರುವುದು. ಆದರೆ ಈ ಮಾತಿನ ಇಂಗಿತವನ್ನು ತಿಳಿದವರು ವಿರಳ. ಆ ದೃಷ್ಟಿಯನ್ನು ಮುಂದಿಟ್ಟುಕೊಂಡು ಮಕ್ಕಳನ್ನು ದಕ್ಷತೆಯಿಂದ ಬೆಳೆಸುವವರೂ ತೀರ ವಿರಳ. ಮೇಲಾಗಿ ಮಾನವನ ಕಲ್ಯಾಣಕ್ಕಾಗಿ ಎಂದು ಕಂಡುಹಿಡಿದ ವಿಜ್ಞಾನದ ವಸ್ತುಗಳು ಇಂದು ಮಾನವನ ಸರ್ವನಾಶಕ್ಕೆ ಸಾಧನವಾಗತೊಡಗಿವೆ. ವಿಜ್ಞಾನದ ಪ್ರಗತಿಯಲ್ಲಿಯೂ ಮಗು ಪಾಲುಗೊಳ್ಳಬೇಕು. ವಿಜ್ಞಾನದೊಡನೆ, ಒಳಿತುಕೆಡುಕುಗಳನ್ನು ನೋಡುವ ಜಾಣ್ಮೆ–ವಿವೇಕವನ್ನೂ ಬೆಳಸಿಕೊಂಡು ಬರಬೇಕು. ವಿವೇಕದ ಅಂಕುಶಕ್ಕೆ ಒಳಗಾಗದ ವಿಜ್ಞಾನವು ಎಷ್ಟೊಂದು ವಿನಾಶಕಾರಿಯಾಗುವುದೆಂಬುದು ಇಂದಿನ ನಿತ್ಯಾನುಭವದ ಸಂಗತಿಯಾಗಿದೆ. ಬಿರುಸಾದ ಬಂಡೆಗಲ್ಲನ್ನು ಭೇದಿಸಿ ಸವಿನೀರಿನ ಬುಗ್ಗೆಯನ್ನು ಹೊರಹೊಮ್ಮಿಸುವುದು ಖ್ಯಾತವಿಜ್ಞಾನಿಯಾದ ನೋಬೆಲ್‌ನ ಪವಣಿಕೆಯಾಗಿತ್ತು. ಅದೇ ಸ್ಫೋಟಕ ಶಕ್ತಿಯು ಇಂದು ಯುದ್ಧದಲ್ಲಿ ಒಂದು ಮಾರಕಾಸ್ತ್ರವಾಗಿದೆ. ವಿಜ್ಞಾನದ ಇನ್ನೂ ಅನೇಕ ಶೋಧಗಳು ತಮ್ಮ ನೈಜವಾದ ಮೂಲೋದ್ದೇಶವನ್ನು ಬಿಟ್ಟುಕೊಟ್ಟು ಸ್ವಾರ್ಥ–ಸ್ಪರ್ಧೆಗಳ ಕೈಗೊಂಬೆ

ಗಳಾಗಿವೆ. ಸಾಮಾನ್ಯ ಶಾಂತಿಪ್ರಿಯ ಮಾನವನ ಅಸ್ತಿಜೀವಿತ ಗಳಿಗೂ ಗಂಡಾಂತರಕಾರಿಯಾಗಿವೆ.

ಇಂಥ ಸಂದರ್ಭದಲ್ಲಿ ವಿಜ್ಞಾನ ಹಾಗೂ ವಿವೇಕಗಳನ್ನು ಅವುಗಳ ಮಹತಿಗೆ ಅನುಗುಣವಾಗಿ ಸಮನ್ವಯಗೊಳಿಸುವ ನೂತನ ಸಮಾಜದ ನಿರ್ಮಾಣವಾಗಬೇಕಾಗಿದೆ. ಸತ್ಯ, ಶಾಂತಿ, ಅಹಿಂಸೆ ಹಾಗೂ ಪ್ರೇಮ, ಇವು ನೂತನ ಸಮಾಜಕ್ಕೆ ಆಧಾರ ವಾದ ನಾಲ್ಕು ಗಟ್ಟಿಮುಟ್ಟಾದ ಕಂಬಗಳು. ಈ ಸಮಾಜದಲ್ಲಿ ಸ್ವಾರ್ಥಸ್ಪರ್ಧೆಗಳ, ಮೇಲು ಕೀಳುಗಳ ಭಾವನೆ ಅಳಿದುಹೋಗ ಬೇಕು. ಶ್ರಮಜೀವಿಗಳ ಶೋಷಣೆ ನಿಲ್ಲಬೇಕು.

ಈ ಸದ್ಭಾವನೆಗಳಿಂದ ಕೂಡಿದ ವ್ಯಕ್ತಿಗಳ ನಿರ್ಮಾಣ ದಿಂದಲೇ ನೂತನ ಸಮಾಜದ ನಿರ್ಮಿತಿ. ವ್ಯಕ್ತಿಗಳ ಸುಸಂಘಟಿತ ವಾದ ಗುಂಪೇ ಸಮಾಜ. ವ್ಯಕ್ತಿ ಬಲಹೀನವಾದರೆ, ಸಮಾಜವೂ ಬಲಹೀನವಾಗುವುದು. ವ್ಯಕ್ತಿಯು ಹೃದಯಹೀನನಾದರೆ ಸಮಾಜವೂ ಹೃದಯಹೀನವಾಗುವುದು. ವ್ಯಕ್ತಿಯು ಈ ಸಾಮಾಜಿಕ ಸದ್ಗುಣಗಳನ್ನು, ಸದ್ಭಾವನೆಗಳನ್ನು ಬೆಳಸಿಕೊಂಡು ಬಂದರೇನೆ ಸಮಾಜದಲ್ಲಿ ಶಾಂತಿಸ್ವಾಸ್ಥ್ಯಗಳು ನೆಲೆಸುವುವು— 'Let there be one rascal less in the world'— ಎಂದು ತತ್ವಜ್ಞಾನಿಯಾದ **ಕಾರ್ಲಾಯಿಲ್**ನು ಹೇಳಿರುವನು. (ಪ್ರಪಂಚದಲ್ಲಿಯ ಒಬ್ಬ ಕೀಳು ವ್ಯಕ್ತಿಯು ಕಡಿಮೆ ಯಾಗಲಿ). 'ಅನ್ಯರ ಡೊಂಕನ್ನೇಕೆ ತಿದ್ದುವಿರಿ; ನಿಮ್ಮ ಡೊಂಕನ್ನು ನೀವು ತಿದ್ದಿಕೊಳ್ಳಿರಿ' ಎಂದು ಬಸವಣ್ಣನವರ ಉಪದೇಶ. ಸಮಾಜದ ಕೊಳೆಯನ್ನು ತೆಗೆಯುವ ಕಾರ್ಯ ಒಂದೊಂದು ವ್ಯಕ್ತಿಯು ತಿದ್ದುವಿಕೆಯಿಂದಲೆ, ಅವರಿವರಿಂದಲೆ ಸಾಗಬೇಕೆಂಬು

ದನ್ನು ಈ ಮಹಾಪುರುಷರು ಎತ್ತಿ ತೋರಿಸಿರುವರು : '**ಉದ್ಧರೇತ್ ಆತ್ಮನಾ ಆತ್ಮಾನಮ್**' !

ಎಳಕವಾದ ಸಸಿಯನ್ನು ಬೇಕಾದಹಾಗೆ ಬಗ್ಗಿಸಬಹುದು, ಬದಲಿಸಬಹುದು. ಬೆಳೆದ ಗಿಡವು ಬದಲಿಕೆಯ ಭೂಮಿಕೆಯನ್ನು ದಾಟಿಬಿಟ್ಟಿರುವುದು. ಅದರಲ್ಲಿ ವ್ಯತ್ಯಾಸವನ್ನು ಮಾಡುವುದು ನಮ್ಮ ಅಳವಿಗೆ ಮೀರಿದುದು. ಎಳೆಯಂತನದಲ್ಲಿ ಮಗುವಿಗೆ ನಾವು ನಮಗೆ ಅಪೇಕ್ಷಿತವಾದ ಸಂಸ್ಕಾರವನ್ನು ಕೊಡಬಹುದು. ಸಾಮಾಜಿಕ ಸದ್ಗುಣಗಳನ್ನು ಆತನ ಹಸನಾದ ಹೃದಯದಲ್ಲಿ ಹೊತ್ತಿಸಬಹುದು. ಮೇಣದಂತೆ ಮಿದುವಾದ ಆತನ ಮನಸ್ಸಿನಲ್ಲಿ ಸುವಿಚಾರಗಳನ್ನು ಮೂಡಿಸಬಹುದು. 'ಹಸೀಗೋಡೆಯ ಮೇಲೆ ಹರಳಿಟ್ಟಂತೆ' ಅವು ಸ್ಥಿರವಾಗಿ ಅಲ್ಲಿ ನೆಲಸುವುವು.

ನೂತನ ಸಮಾಜದ ಭದ್ರತೆಗೆ ಅತ್ಯಗತ್ಯವಿರುವ ಈ ಮಾನಸಿಕ ಭಾವನಿಕ ಪಲ್ಲಟವೂ ಒಂದು ಬಗೆಯ 'ಕ್ರಾಂತಿ' ಯಾಗಿದೆ. ಮನೆ ಶಾಲೆ ಸುತ್ತಲಿನ ಸಮಾಜಗಳಲ್ಲಿ ನಿರ್ದೋಷವಾದ ಪರಿಸರವನ್ನು ಮಗುವಿಗೆ ಒದಗಿಸುವುದು, ಉಪಯುಕ್ತವಾದ ಚಟುವಟಿಕೆಯ ಮುಖಾಂತರ ಕ್ರಿಯಾತ್ಮಕ ಶಿಕ್ಷಣವನ್ನು ಆತನಿಗೆ ಕೊಡುವುದು—ಈ ಕ್ರಾಂತಿಯನ್ನು ಸಾಧಿಸುವ ಸಾಧನಗಳಾಗಿವೆ. ವಿಧಾಯಕ ಚಟುವಟಿಕೆಯಲ್ಲಿ ತೊಡಗಿದ ಮಗು ತನ್ನ ಸಹಜ ಪ್ರವೃತ್ತಿಗಳನ್ನೂ ಮೂಲಭಾವನೆಗಳನ್ನೂ 'ಉಜ್ವಲ'ಗೊಳಿಸುವುದು. ಸರಿಯಾದ ಸಾಮಾಜಿಕ ಜೀವನಕ್ಕೆ ತನ್ನನ್ನು ಅಣಿಗೊಳಿಸುವುದು. ಅಂತೆಯೆ ಒಂದೊಂದು ಮಗುವಿನಲ್ಲಿ ಈ ಬಗೆಯ ಮನಸ್ಸಿನ ಹಾಗೂ ಹೃದಯದ ಪಲ್ಲಟಕ್ಕೆ-'the spearhead of a silent revolution' — ನಿಶ್ಶಬ್ದ

ಕ್ರಾಂತಿಯನ್ನು ಸಾಧಿಸುವ ಮೊನೆಯಾದ ಅಸ್ತ್ರ ಎಂದು ಗಾಂಧೀಜಿ ಹೇಳಿರುವರು.

ಸೃಷ್ಟಿಯ ಹಂತಗಳಲ್ಲಿ ಬುದ್ಧಿಶಕ್ತಿಯುಳ್ಳ ಮಾನವನೇ ಕೊನೆಯ ಮೆಟ್ಟಲು. ಇಂದಿನ ಮಗು ನಾಳಿನ ಪ್ರಬುದ್ಧ ಮಾನವ. ನೂತನ ಸಮಾಜದ ರಚನೆಗೆ ಮಗುವೇ ತಳ ಪಾಯ.

ಮಕ್ಕಳ ಮಹತಿಯನ್ನು ಅರಿತುಕೊಂಡ ಮೇಧಾವಿಗಳು ಬೇರೆಬೇರೆ ಮಾತುಗಳಲ್ಲಿ ಅದನ್ನು ವ್ಯಕ್ತಗೊಳಿಸಿರುವರು.

ಶಿಕ್ಷಣಶಾಸ್ತ್ರದ ಮಹರ್ಷಿಗಳಲ್ಲಿ ಅದ್ವಿತೆಯನ್ನು ಪಡೆದ **ಕೋಮಿನಿಯಸ್**ನು ಹೀಗೆ ಹೇಳುವನು – 'ಸೃಷ್ಟಿ ವಸ್ತುಗಳಲ್ಲಿ ಮಾನವನು ಅತ್ಯುತ್ತಮ ಹಾಗೂ ಅತಿಶ್ರೇಷ್ಠ. ಮಾನವನನ್ನು ನಿರ್ಮಿಸುವುದಾದರೆ (ಮಗುವಿನ) ಶಿಕ್ಷಣದಿಂದಲೇ ಅತನ ನಿರ್ಮಾಣವಾಗಬೇಕು.' ಎಳೆಯ ವಯಸ್ಸಿನಲ್ಲಿಯೆ ಮಾನವನ ನಿರ್ಮಿತಿ ಸಾಧ್ಯ, ಅನಂತರದ ಮೇಲಲ್ಲ.

ಕೊನೆಯದಾಗಿ, ಮಕ್ಕಳ ಬಗ್ಗೆ, ಶ್ರೇಷ್ಠ ಕವಿಯಾದ **ಖಲೀಲಗಿಬ್ರಾನ**ನು ಹೇಳುವ ಮುತ್ತಿನಂಥ ಮಾತುಗಳಿವು—

'ನಿಮ್ಮ ಮಕ್ಕಳು ನಿಮ್ಮ ಮಕ್ಕಳಲ್ಲ. ಜೀವನಕ್ಕಾಗಿ ಹಂಬಲಿಸುವ ಜೀವನದ ಮಕ್ಕಳವರು. ನಿಮ್ಮ ಮುಖಾಂತರ ಅವರು ಬಂದರೂ ನಿಮ್ಮಿಂದ ಬಂದವರಲ್ಲ. ನಿಮ್ಮ ಜೊತೆ ಯಲ್ಲಿದ್ದರೂ, ನಿಮ್ಮ ಒಡೆತನಕ್ಕೆ ಅವರು ಒಳಪಟ್ಟವರಲ್ಲ. ಅವರಿಗೆ ನೀವು ಪ್ರೀತಿಯನ್ನು ನೀಡಬಹುದು. ನಿಮ್ಮ ವಿಚಾರ ಗಳನ್ನಲ್ಲ. ಏಕೆಂದರೆ ಅವರಿಗೆ ತಮ್ಮದೇ ಆಗಿರುವ ಸ್ವಂತದ

ವಿಚಾರಗಳಿವೆ—ಕವಿಯ ಈ ಅಂತರ್ವಾಣಿಯು, ಆಧುನಿಕ ಶಿಕ್ಷಣದ ಸಿದ್ಧಾಂತಗಳನ್ನೆಲ್ಲ ಸಾರವತ್ತಾಗಿ ಸಂಗ್ರಹಿಸಿದೆ. ಈ ಮಾತುಗಳನ್ನು ಮಕ್ಕಳ ತಾಯಿತಂದೆಗಳೂ, ಶಿಕ್ಷಕರೂ ನಿತ್ಯವೂ ಸ್ಮರಿಸುವಂತಿದೆ.

## 14. ಮಕ್ಕಳು ಹಾಗೂ ಭಾವೈಕ್ಯ

ಗಾಂಧೀಜಿಯವರ ನೇತೃತ್ವದಲ್ಲಿ ಅಹಿಂಸಾತ್ಮಕ ಹೋರಾಟದಿಂದ, ತಮ್ಮ ಅಗಣಿತ ತ್ಯಾಗ ಬಲಿದಾನಗಳಿಂದ, ಭಾರತೀಯರು ಪರಕೀಯರ ದಾಸ್ಯದಿಂದ ಮುಕ್ತರಾದರು. ಜಗತ್ತಿನ ಸ್ವತಂತ್ರ ರಾಷ್ಟ್ರಗಳ ಮಾಲಿಕೆಯಲ್ಲಿ ಭಾರತವು ತನ್ನ ಸ್ಥಾನವನು ಪಡೆಯಿತು. ಈ ಸ್ವಾತಂತ್ರ್ಯದ ಮಧುರ ಫಲಗಳಲ್ಲಿ ಭಾಷಾವಾರು ತತ್ವದ ಮೇಲೆ ನೂತನ ರಾಜ್ಯಗಳ ನಿರ್ಮಾಣವಾದುದೂ ಒಂದಾಗಿದೆ. ಮುಂಚಿನ ಪ್ರಾಂತಗಳ ರಚನೆಗೆ ಯಾವ ತಾತ್ವಿಕ ತಳಹದಿಯೂ ಇರಲಿಲ್ಲ. ಕೇವಲ ಆಡಳಿತದ ಅನುಕೂಲತೆಯೊಂದೇ ಅಂದಿನ ಮುಖ್ಯ ಉದ್ದೇಶವಾಗಿತ್ತು. ಅದರಿಂದ ಒಂದೇ ಭಾಷೆಯನ್ನಾಡುವ, ಒಂದೇ ಐತಿಹಾಸಿಕ ಪರಂಪರೆಯುಳ್ಳ ಜನರು ಬೇರೆಬೇರೆ ಪ್ರಾಂತಗಳಲ್ಲಿ ನೇರ್ಪಡೆಯಾಗಿದ್ದರು. ಕರ್ನಾಟಕವಂತೂ ಹದಿನೆಂಟು ಹೋಳುಗಳಾಗಿ ಅಂದಿನ ಬೇರೆಬೇರೆ ಪ್ರಾಂತ ಹಾಗೂ ನೆರೆಯ ಸಂಸ್ಥಾನಗಳಲ್ಲಿ ಹಂಚಿ ಹೋಗಿತ್ತು.

ಸಮ್ರಾಟ ಅಶೋಕನ ನಂತರ ಸಾರ್ವಭೌಮ ಪ್ರಜಾರಾಜ್ಯವಾಗಿ ಸಮಗ್ರ ಭಾರತವು ಒಂದೇ ಧ್ವಜದಲ್ಲಿ ನೆಲಸುವಂತಾಯಿತು. ಆದರೆ ಸ್ವಾತಂತ್ರ್ಯಪೂರ್ವದ ಏಕರಾಷ್ಟ್ರಿಯತೆಯ ದೃಷ್ಟಿಯು ಮಂದವಾಯಿತು. 'ನಾವೆಲ್ಲರೂ ಪ್ರಥಮತಃ

ಭಾರತೀಯರು' ಎಂಬ ಏಕಾತ್ಮತೆಯ ಭಾವನೆಯು ಶಿಥಿಲವಾಯಿತು. ರಾಜಕೀಯವಾಗಿ ಒಂದುಗೂಡಿದರೂ, ಹೃದಯಗಳು ಹೊಂದಿಕೊಳ್ಳಲಿಲ್ಲ. 'ನಾವೆಲ್ಲರೂ ಭಾರತೀಯರು' ಎಂಬ ಐಕ್ಯದ ಭಾವನೆಯನ್ನು ಹಿಂದಕ್ಕೆ ಸರಿಸಿ, 'ನಾವೂ - ನೀವೂ' 'ನಮ್ಮದು-ನಿಮ್ಮದು' ಎಂಬ ಒಡಕಿನ ಪ್ರವೃತ್ತಿಯು ಬಲವಾಗ ತೊಡಗಿದೆ. ಭಾಷಾವಾದ,ಸೀಮಾವಾದ ಮುಂತಾದ ವಾದಗಳು ತಲೆಯೆತ್ತಿವೆ, ಜನರ ತಲೆಕೆಡಿಸಿವೆ. ಸರಕಾರಕ್ಕೆ ತಲೆ ನೋವಾಗಿವೆ. ರಾಜ್ಯ ರಾಜ್ಯಗಳಲ್ಲಿಯ ನೆಮ್ಮದಿಯನ್ನು ಕಲಕಿವೆ.

ಒಡಕಿನ ಈ ಭಾವನೆಯನ್ನು ತಡೆಗಟ್ಟಲು, ಏಕರಾಷ್ಟ್ರೀಯತೆಯ ಭಾವನೆಯನ್ನು ಪ್ರಚಾರಗೊಳಿಸಲು ಸರಕಾರವು ಯೋಚಿಸಿದೆ. ಚಿಕ್ಕಮಕ್ಕಳಿಂದಲೇ ಭಾವೈಕ್ಯದ ಪ್ರಚಾರವು ಪ್ರಾರಂಭವಾಗಬೇಕು. ಮಕ್ಕಳ ಹೃದಯವು ಹದವಾದ, ಹಸನಾದ ಭೂಮಿ. ಯಾವುದೇ ಪೂರ್ವಗ್ರಹಿಕೆಗಳೂ ಅದರಲ್ಲಿ ಮನೆಮಾಡಿಕೊಂಡಿರುವುದಿಲ್ಲ. ಸ್ವಾರ್ಥದಿಂದ ಅದು ಸಂಕುಚಿತವಾಗಿರುವುದಿಲ್ಲ. ದುರಭಿಮಾನದಿಂದ ದೂಷಿತವಾಗಿರುವುದಿಲ್ಲ. ಮಕ್ಕಳ ಸ್ನೇಹಕ್ಕೆ ಜಾತಿ ಮತಗಳ, ಶ್ರೀಮಂತಿಕೆ ಬಡತನಗಳ, ಸ್ಥಾನಮಾನಗಳ ವೈಷಮ್ಯವಿಲ್ಲ. ಮಕ್ಕಳ ಹೃದಯದಲ್ಲಿ ಬಿತ್ತಿದ ಭಾವೈಕ್ಯದ ಬೀಜಗಳು ಹುಸಿ ಹೋಗುವುದಿಲ್ಲ. ಮಕ್ಕಳಿಗಾಗಿ ರಚಿಸುವ ಪಠ್ಯಪುಸ್ತಕಗಳಲ್ಲಿ, ಮನರಂಜನೆಯ ಚಿಕ್ಕ ಪ್ರಹಸನಗಳಲ್ಲಿ, ಮಕ್ಕಳಿಗಾಗಿ ಬಾನುಲಿಯ ಪ್ರಸಾರಗಳಲ್ಲಿ —ಭಾವೈಕ್ಯದ ಉದ್ದೇಶವು ಸುಲಭವಾಗಿ ಈಡೇರುವಂತಿವೆ.

ಈ ಸಂದರ್ಭದಲ್ಲಿ **ರಾಷ್ಟ್ರೀಯ ಭಾವೈಕ್ಯ ಸಮಿತಿ**ಯವರು ಹೇಳಿಕೊಟ್ಟ ಹಾಗೂ ಪಂಡಿತ ನೆಹರೂರವರ ಭಾಷಣ

ದಲ್ಲಿ ಬಂದಿರುವ ಕೆಲವೊಂದು ವಿಚಾರಗಳು ಮನನೀಯವಾಗಿದೆ. ಅವುಗಳ ಸಂಕ್ಷಿಪ್ತಸಾರವು ಹೀಗಿದೆ :

"ಭಾವೈಕ್ಯದ ಭಾವನೆಯನ್ನು ಬಲಿಸುವುದರಲ್ಲಿ ಶಿಕ್ಷಣದ ಪಾತ್ರವು ಹಿರಿದಾದುದು. ಕೇವಲ ವಿಷಯಜ್ಞಾನವನ್ನು ಮಾಡಿಕೊಡುವುದೇ ಶಿಕ್ಷಣವಾಗಿಲ್ಲ. ಅದು ಮಗುವಿನ ದೃಷ್ಟಿಯನ್ನು ವಿಶಾಲಗೊಳಿಸಬೇಕು : 'ನಾವೆಲ್ಲರೂ ಒಂದು' ಎಂಬ ರಾಷ್ಟ್ರೀಯ ಏಕಾತ್ಮತೆಯನ್ನು ಘೋಷಿಸಬೇಕು. ತ್ಯಾಗ ಹಾಗೂ ಶಿಶಿಕ್ಷಾ ಭಾವನೆಗಳನ್ನು ಹೊತ್ತಿಸಬೇಕು. ಸ್ವಹಿತವನ್ನು ರಾಷ್ಟ್ರದ ವ್ಯಾಪಕವಾದ ಉತ್ಕರ್ಷವಲ್ಲಿ ವಿಲೀನಗೊಳಿಸಬೇಕು."

**ಭಾವೈಕ್ಯವೆಂದರೇನು ?** — ಎಲ್ಲರಿಗೂ ಸಮಾನವಾಗಿರುವ ಕೆಲವೊಂದು ಉದ್ದೇಶ ಹಾಗೂ ಆದರ್ಶಗಳಲ್ಲಿ, ಧ್ಯೇಯಗಳಲ್ಲಿ, ಜನತೆ ಆತ್ಮೀಯವಾಗಿ ಪಾಲುಗೊಳ್ಳಬೇಕು. ಅಲ್ಪವಾದ, ಪಾಕ್ಷಿಕವಾದ ನಿಷ್ಠೆಗಳನ್ನು ಬದಿಗಿರಿಸಿ, ಈ ಆದರ್ಶ ಧ್ಯೇಯಗಳಿಗೆ ತಮ್ಮ ಜೀವನದಲ್ಲಿ ಉನ್ನತವಾದ ಸ್ಥಾನವನ್ನು ಕೊಡಬೇಕು. ಅದೊಂದು ಏಕಾತ್ಮತೆಯ ಭಾವನೆ. ಈ ಭಾವನೆಯು ಎಲ್ಲ ಪಂಗಡಗಳನ್ನು ಇಲ್ಲವೆ ಅವುಗಳಲ್ಲಿರುವ ಸಾಂಸ್ಕೃತಿಕ ವ್ಯತ್ಯಾಸಗಳನ್ನು ಮೀರಿ ನಿಲ್ಲಬೇಕು. ಭಿನ್ನಭಿನ್ನವಾದ ಜಾತಿ, ಧರ್ಮ ಹಾಗೂ ಭಾಷೆಗಳಿಗೆ ಹೊಂದಿಕೊಂಡಿರುವ ಗುಂಪುಗಳನ್ನು ಒಂದೇ ಸುಸಂಘಟಿತವಾದ ಸಮಾಜದಲ್ಲಿ ಈ ಭಾವನೆಯು ಒಂದುಗೂಡಿಸಬೇಕು ; ರಾಷ್ಟ್ರೀಯ ಭಾವೈಕ್ಯವನ್ನು ಈ ರೀತಿಯಾಗಿ ಸಂಗ್ರಹಿಸಿ ನಿರೂಪಿಸಬಹುದು.

ಭಾವೈಕ್ಯದ ಬಗ್ಗೆ **ಪಂಡಿತ ನೆಹರೂರವರ ಮಾತುಗಳು** ತುಂಬಾ ಮನನೀಯವಾಗಿವೆ. ಅವುಗಳ ಸಾರವು ಹೀಗೆ :–

'ನಮ್ಮ ದೃಷ್ಟಿಯು ಸಂಕುಚಿತವಾಗಬಾರದು. ಮನಸ್ಸೂ ಸಂಕುಚಿತವಾಗಬಾರದು ; ಪ್ರಾಂತೀಯತೆ, ಪಕ್ಷೀಯತೆ, ಜಾತೀಯತೆಗಳಿಂದ ನಾವು ದೂರವಾಗಿರಬೇಕು. ಏಕೆಂದರೆ ಭಾರತೀಯರಾದ ನಾವು ಒಂದು ಮಹತ್ಕಾರ್ಯವನ್ನು ನೆರವೇರಿಸಬೇಕಾಗಿದೆ. ಗಣರಾಜ್ಯಭಾರತದ ನಾಗರೀಕರಾದ ನಾವು ಬೆನ್ನು ಬಾಗಿಸದೆ ತಲೆಯೆತ್ತಿಕೊಂಡು ನಿಲ್ಲುವಂತಾಗಬೇಕು. ನಮ್ಮ ಧ್ಯೇಯವು ಆಕಾಶದಷ್ಟು ಉನ್ನತವಾಗಿದ್ದರೂ ನಮ್ಮ ಪಾದಗಳು ಈ ನೆಲದ ಮೇಲೆ ಸ್ಥಿರವಾಗಿ ನಿಲ್ಲಬೇಕು. ಹೀಗೆ ಇದ್ದುಕೊಂಡೇ ಭಾರತದ ಜನತೆಯ ಏಕೀಕರಣವನ್ನು ಅಖಂಡತೆಯನ್ನು ನಾವು ಸಾಧಿಸಬೇಕು. ನಮ್ಮನಮ್ಮೊಳಗಿನ ವಿಸ್ಮಯಕಾರಕವಾದ ವಿವಿಧತೆಗಳನ್ನು ಉಳಿಸಿಕೊಂಡೇ, ಈ ಬಗೆಯ ಏಕೀಕರಣದಿಂದ ನಾವು ಒಂದುಗೂಡಿ ಬಲಿಷ್ಠವಾದ ರಾಷ್ಟ್ರೀಯ ಘಟಕವಾಗಬೇಕು.'

## 15. ಭಾವೈಕ್ಯದ ಅಗತ್ಯವೇಕೆ ?

ಅನಾದಿಕಾಲದಿಂದಲೂ ಭಾರತವು ಎಲ್ಲರಿಗೂ ತನ್ನ ಬಾಗಿಲನ್ನು ತೆರದಿಟ್ಟಿದೆ. ಅನೇಕ ಮತ, ಪಂಥ, ಜಾತಿ ಹಾಗೂ ಭಾಷೆಗಳ ಜನರನ್ನು ಸ್ವಾಗತಿಸಿದೆ, ಸಮಾನವಾದ ಸ್ಥಾನಮಾನಗಳನ್ನಿತ್ತಿದೆ. ಆಶ್ರಯವನ್ನಿತ್ತಿದೆ. ಆಸೇತು ಹಿಮಾಚಲದವರೆಗಿನ ಸಮಗ್ರ ಭಾರತದಲ್ಲಿ ಭಾರತೀಯ ಸಂಸ್ಕೃತಿಯೆಂಬ ಐಕ್ಯದ ಭಾವನೆಯಿಂದ ಎಲ್ಲರನ್ನೂ ಒಂದುಗೂಡಿಸಿದೆ. ಪಂಡಿತ ನೆಹರೂರವರು ಒಳ್ಳೇ ಮಾರ್ಮಿಕವಾಗಿ ಹೇಳುವಂತೆ-ಬಣ್ಣ ಬಣ್ಣದ ಬೆಡಗಿನ ಹೂಗಳನ್ನು ಒಂದೇ ದಾರದಲ್ಲಿ ಕಟ್ಟಿದ ಹೂಮಾಲೆಯಂತೆ, ವಿವಿಧ ರತ್ನಗಳಿಂದ ರಚಿಸಿದ ಮಣಿಹಾರದಂತೆ

– ವಿವಿಧತೆಯಲ್ಲಿಯೂ ಏಕರಾಷ್ಟ್ರೀಯತೆಯ, ಏಕರೂಪವಾದ ಸಂಸ್ಕೃತಿಯ ಭಾವೈಕ್ಯವನ್ನು ಬೆಳೆಸುತ್ತ ಬಂದಿದೆ. ಸ್ವಂತದ ಹಾಗೂ ಸ್ವಜನರ ಹಿತಾಸಕ್ತಿಗಳೆಂಬ ಒಡಕನ ಪ್ರವೃತ್ತಿಗಳಿಂದ ಈ ಭಾವೈಕ್ಯಕ್ಕೆ ಇಂದು ಬಾಧೆ ತಟ್ಟಿದೆ. ಅದು ಭಂಗವಾಗ ತೊಡಗಿದೆ. ಈ ಭೇದಬುದ್ಧಿಯು ರಾಷ್ಟ್ರಕ್ಕೆ ಹಾನಿಕರವಾಗಿದೆ, ರಾಷ್ಟ್ರದ ಬಹುಮುಖವಾದ ಪ್ರಗತಿಗೆ ಕಾಲ್ತೊಡಕಾಗಹತ್ತಿದೆ.

ಅನೂಚೀನವಾಗಿ ನಡೆದುಬಂದ ರಾಷ್ಟ್ರೀಯ ಒಗ್ಗಟ್ಟು ಒಡೆದುಹೋಗದಂತೆ ಅದನ್ನು ಮತ್ತೆ ಉಜ್ಜೀವನಗೊಳಿಸುವುದು ಇಂದು ತೀರ ಅಗತ್ಯದ ಕಾರ್ಯವೆನಿಸಿದೆ. ಪ್ರಭುತ್ವವು ಆ ದಿಸೆಯಲ್ಲಿ ಅನೇಕ ಯೋಜನೆಗಳನ್ನು ರೂಪಿಸಿದೆ. 'ತಾವಾಯಿತು, ತಮ್ಮದಾಯಿತು' ಎಂಬ ಸಂಕುಚಿತ ವಿಚಾರಗಳನ್ನು ಹಿಂದೆಸರಿಸಿ, ಸಮಗ್ರ ರಾಷ್ಟ್ರದ ಹಿತಕ್ಕೆ ಪ್ರಾಶಸ್ತ್ಯ, ಪ್ರಾಧಾನ್ಯತೆಗಳನ್ನು ಕೊಡುವ ಮನೋವೃತ್ತಿಯನ್ನು ಜನತೆಗೆ ತಂದುಕೊಡುವುದು ಇಂದು ತೀರ ಅಗತ್ಯವಾಗಿದೆ. ಧರ್ಮ–ಜಾತಿ–ಭಾಷೆಗಳ ಹೆಸರಿನಲ್ಲಿ ಹಾನಿಕರವಾದ ಅತಃಕಲಹಗಳನ್ನು ಅಡಗಿಸಲು 'ನಾವೆಲ್ಲರೂ ಭಾರತೀಯರು ಮೊದಲು' – ಎಂಬ ರಾಷ್ಟ್ರೀಯ ಭಾವೈಕ್ಯವು ಅದ್ವಿತೀಯವಾದ ಸಾಧನವಾಗಿದೆ. ರಾಷ್ಟ್ರೀಯ ಭಾವೈಕ್ಯವನ್ನು ಬೆಳೆಸಿಕೊಂಡ ಹಂಗು ನಿಜವಾಗಿಯೂ ರಾಷ್ಟ್ರೀಯ ಸಂಪತ್ತೆನಿಸುವುದು.

**"ಭಾರತವು ಉಳಿದರೆ ನಾವು ಉಳಿಯುವೆವು. ಭಾರತವು ಅಳಿದರೆ ನಾವು ಅಳಿಯುವೆವು.**—ಒಟ್ಟು ಭಾರತದ ಹಿತವೇ ನಮ್ಮ ಹಿತವು. ಉಜ್ವಲವಾದ ಇತಿಹಾಸವುಳ್ಳ, ವಿಶ್ವಕ್ಕೇನೆ ಬೆಳಕನ್ನು ನೀಡಬಲ್ಲ ಶ್ರೇಷ್ಠ ಸಂಸ್ಕೃತಿಯುಳ್ಳ ಭಾರತದ

ನಾಗರಿಕರು ನಾವು. **'ದುರ್ಲಭಂ-ಭಾರತೇ ಜನ್ಮ'** ಎಂದು ಭಾರತೀಯರಾದುದಕ್ಕೆ ನಮ್ಮಲ್ಲಿ ಅಭಿಮಾನವು ತುಂಬಿತುಳುಕ ಬೇಕು. ಭಾರತದ ಕೀರ್ತಿಗಾಗಿ ಭಾರತದ ಉತ್ಕರ್ಷಕ್ಕಾಗಿ ನಾವು ಎಷ್ಟೇ ತ್ಯಾಗ ಮಾಡಿದರೂ ಕಡಿಮೆ''. ಈ ಬಗೆಯ ಮನೋವೃತ್ತಿಯನ್ನು ಮಕ್ಕಳಿಗೆ ತಂದುಕೊಡಲು ಮಕ್ಕಳ ಹಾಗೂ ರಾಷ್ಟ್ರದ ಹಿತೈಷಿಗಳಾದ ತಂದೆತಾಯಿಗಳು, ಶಿಕ್ಷಣ ಸಂಸ್ಥೆಗಳು, ಲೋಕಶಿಕ್ಷಣದ ಪ್ರಭಾವೀ ಸಾಧನಗಳಾದ ವೃತ್ತ ಪತ್ರಗಳು, ಬಾನುಲಿ, ಚಿತ್ರವಾಣಿ, ನಾಟಕ ಹಾಗೂ ಚಿತ್ರಪಟಗಳು ಸಮಯಾನುಸಾರವಾಗಿ ಸತತ ಪ್ರಯತ್ನ ಮಾಡಬೇಕು. ರಾಷ್ಟ್ರಕ್ಕೆ, ರಾಷ್ಟ್ರದ ಬಹುಮೂಲ್ಯ ಸಂಪತ್ತಾದ ಮಕ್ಕಳಿಗೆ, ಇಂದು ಅವರು ಸಲ್ಲಿಸಬೇಕಾದ ಹೆಚ್ಚಿನ ಸೇವೆಯಾಗಿದೆ.

## 16. ಮಕ್ಕಳ ಹಿತಕ್ಕಾಗಿ ಮಾಡುವ ವೆಚ್ಚ ವ್ಯರ್ಥವಾಗದು

ಮಕ್ಕಳು ರಾಷ್ಟ್ರದ ಬಹುಮೌಲಿಕ ಸಂಪತ್ತು ಎಂಬುದನ್ನು ಯಾರೂ ಅಲ್ಲಗಳೆಯುವುದಿಲ್ಲ. ಮಕ್ಕಳಿಗೆ ಸರಿಯಾದ ಸಂಸ್ಕಾರವು ಶೈಶವದಿಂದಲೇ ದೊರೆಯಬೇಕೆಂಬುದನ್ನು ಎಲ್ಲರೂ ಒಪ್ಪುವರು. ಕುಟುಂಬಯೋಜನೆಯ ಪ್ರಚಾರವಿದ್ದರೂ ಜನ ಸಂಖ್ಯೆಯು ಎಣಿಕೆಗೆ ಮೀರಿ ಬೆಳೆಯುತ್ತಿದೆ. ತದನುಗುಣವಾಗಿ ಮಕ್ಕಳ ಸಂಖ್ಯೆಯೂ ಶಿಕ್ಷಣಸಂಸ್ಥೆಗಳಲ್ಲಿ ಪವಣುಮೀರಿಹೆಚ್ಚಾ ಗುತ್ತಿದೆ. ರಾಜ್ಯಘಟನೆಯಲ್ಲಿ ವಿಧಿಸಿದ ಅವಧಿಯಲ್ಲಿ, ಸಾರ್ವತ್ರಿಕ ಕಡ್ಡಾಯದ ಶಿಕ್ಷಣವನ್ನು ಕೂಡ ಕೃತಿಯಲ್ಲಿ ತರುವುದು ರಾಜ್ಯ ಗಳಿಗೆ ಶಕ್ಯವಾಗಿಲ್ಲ. ಹಣದ ಕೊರತೆಯನ್ನೇ ಇದಕ್ಕೆ ಕಾರಣ ವಾಗಿ ಮುಂದೆ ಮಾಡುವರು. ಸಾಲ ಹಾಗೂ ಕಾಣಿಕೆಗಳ ರೂಪವಾಗಿ ವಿದೇಶಗಳಿಂದ ಎಷ್ಟು ಹಣವನ್ನು ದೊರಕಿಸಿದರೂ,

ವಿವಿಧ ಯೋಜನೆಗಳಲ್ಲಿ ಅದು ತೊಡಗಿಬಿಡುವುದು. ಮಕ್ಕಳ ಶಿಕ್ಷಣಕ್ಕಾಗಿ ತೆಗೆದಿಡುವ ಮೊತ್ತವು ಸಾಕಾಗುವುದಿಲ್ಲ. ಶಿಶುಗಳಿಗಾಗಿ ಒಳ್ಳೆ ಬಾಲಮಂದಿರಗಳನ್ನು ಒದಗಿಸಲು ಕೈಬಿಚ್ಚಿ ವೆಚ್ಚ ಮಾಡಬೇಕಾಗುವುದು. ಅಂದವಾದ ಕಟ್ಟಡ ಬೇಕು. ಉದ್ಯಾನ, ಕ್ರಿಡಾಮಂದಿರಗಳನ್ನು ಒದಗಿಸಬೇಕು. ಇಂದಿನ ವಿಜ್ಞಾನವು ನಿರ್ಮಿಸುವ ವಿವಿಧ ಶೈಕ್ಷಣಿಕ ಉಪಕರಣಗಳನ್ನು ಒದಗಿಸಬೇಕು. ಇವುಗಳಿಗೆ ಸಾಕಷ್ಟು ಹಣಬೇಕು.

ಈ ವೆಚ್ಚದ ಭಾರವೇ ರಾಜ್ಯಸರಕಾರಗಳಿಗೆ ಒಂದು ದೊಡ್ಡ ಭೀತಿಯಾಗಿದೆ. ಮೇಲಾಗಿ ಮಕ್ಕಳಿಗಾಗಿ ಮಾಡುವ ವೆಚ್ಚವು ಯಾವುದೇ ಉದ್ದಿಮೆಯಂತೆ ಭವಿಷ್ಯತ್ತಿನಲ್ಲಿ ಲಾಭದಾಯಕವಲ್ಲವೆಂಬುದು ಒಂದು ರೂಢವಾದ ವಿಚಾರ. ಈ ವಿಚಾರವು ನೈಜವಾದುದಲ್ಲ. ಅದೊಂದು ಭ್ರಮೆ, ತಪ್ಪು ತಿಳುವಳಿಕೆಯೆಂಬುದನ್ನು ಅನೇಕ ತಜ್ಞರು ನಿಶ್ಚಯಾತ್ಮಕವಾಗಿ ಹೇಳಿರುವರು. ಅವರ ವಿಚಾರಗಳನ್ನು ಹೀಗೆ ಸಂಗ್ರಹಿಸಿ ಹೇಳಬಹುದು.

(1) ಶಿಕ್ಷಣವು ಬಳಸಿಬಿಡುವ ಹಣವಾಗಿಲ್ಲ. ಅದು ಲಾಭದಾಯಕವಾಗಿ ತೊಡಗಿಸಿದ ಹಣವಾಗಿದೆ. (Education is an investment, not consumption: *Mrs. Alva Murdal* – in Edn. in World Perspective).

(2) ಶಿಕ್ಷಣಕ್ಕಾಗಿ ಮಾಡುವ ವೆಚ್ಚವು ಪ್ರಾಪ್ತಿಕರವಾಗಿ ತೊಡಗಿಸಿದ ಹಣವಾಗಿದೆ. ಅದರಿಂದ ಬರುವ ಲಾಭವನ್ನು ತುಸುಮಟ್ಟಿಗೆ ಅಳೆಯಲು ಬರುವಂತಿದೆ.

(Education investment is real and to some degree measurable : *Don Admas*).

(3) ಶಿಕ್ಷಣದ ವೆಚ್ಚವು ಪ್ರಾಪ್ತಿಯ ಉದ್ದೇಶದಿಂದ ರಾಷ್ಟ್ರವು ತೊಡಗಿಸಿದ ಹಣವಾಗಿದೆ. ಮಾನವ ಕಲ್ಯಾಣಕ್ಕಾಗಿ ತೊಡಗಿಸಿದ ಹಣವು ಅತೀವ ಮೌಲ್ಯದ ಬಂಡವಾಳವಾಗಿದೆ. ಭೌತಿಕ ಸಂಪತ್ತಿನ ಉತ್ಪಾದನೆಗಾಗಿ ಸಾಮಾನ್ಯ ಶಿಕ್ಷಣವು ಒಂದು ಮಹತ್ವದ ಸಾಧನವಾಗಿದೆ.

('Education is a national investment.........' 'The most valuable of all capitals is that is invested in human beings'. 'General Education is an important means towards the production of material wealth.'–*Alfred Marshall*).

(4) ಶಿಕ್ಷಣ ಹಾಗೂ ತರಬೇತಿಗಾಗಿ ಮಾಡುವ ವೆಚ್ಚಕ್ಕಿಂತ ಹೆಚ್ಚು ಪ್ರಾಪ್ತಿಕರವಾಗಿ ಬೇರೆ ಕಾರ್ಯದಲ್ಲಿ ಹಣವನ್ನು ತೊಡಗಿಸುವಂತಿಲ್ಲ.

('No investment is more productive than in Education and training'—*Dr. Elba Comez* (Argentina)—in 'The Economics of Education').

(5) ಶಿಕ್ಷಣವೆಂದರೆ ಕೇವಲ ಹಣ ಬಳಸುವುದು. ಕೇವಲ ಕಲ್ಯಾಣಕಾರಿಯಾದ ಚಟುವಟಿಕೆ. ನೀರಾವರಿ, ವಿದ್ಯುತ್‌ಶಕ್ತಿಗಳ ಉತ್ಪಾದನೆಗೆ ಪ್ರಾಶಸ್ತ್ಯಕೊಟ್ಟು ಈ ಲೋಕಹಿತದ ಕಾರ್ಯವನ್ನು ಮುಂದೂಡಬಹುದು–ಎಂದು ನಾವು ಯೋಚಿಸುವುದು ತರವಲ್ಲ: ('let us not think that education is just a consumption or a welfare activity that can be postponed in preference to investment in irrigation, power, etc.'—*Dr. V. K. R. V. Rao.*)

## 17. ವಿಜಯಿಯಾದ ಮಗು–ಮಕ್ಕಳ ಸನದು

ಸ್ವಾತಂತ್ರ್ಯದ ಗಾಳಿ ಎಲ್ಲೆಡೆಗೆ ಬೀಸುತ್ತಿದೆ. ಶತಮಾನಗಳ ದಾಸ್ಯದ ನೊಗವನ್ನು ಚೆಲ್ಲಿಕೊಟ್ಟು ಅನೇಕ ರಾಷ್ಟ್ರಗಳು ಸ್ವಾತಂತ್ರ್ಯ ಪಡೆಯುತ್ತಿವೆ. ಸ್ವಾತಂತ್ರ್ಯದ ಸುಳಿಗಾಳಿ ಶಿಕ್ಷಣ ಕ್ಷೇತ್ರದಲ್ಲಿಯೂ ಬೀಸತೊಡಗಿದೆ. ಪಾರಂಪರಿಕ ಅನ್ಯಾಯ ಬಲುಮೆಗಳಿಂದ ಮಗು ಮುಕ್ತವಾಗಿದೆ. ಬೇಕುಬೇಡಗಳ ಗಣನೆಯಿಲ್ಲದೆ ಮಗುವಿನ ತಲೆಯಲ್ಲಿ ವಿಷಯಗಳನ್ನು ತುಂಬುವ ವಿಧಾನವು ಇಂದು ನಿರಾಕೃತವಾಗಿದೆ. ಶಿಕ್ಷಣದ ಎಲ್ಲ ವಿಷಯಗಳಲ್ಲಿಯೂ ಮಗುವಿಗೆ ಪ್ರಾಧಾನ್ಯ, ಮನ್ನಣೆ ದೊರೆಯುತ್ತಿದೆ. ಮಗು ವಿಜಯಿಯಾಗಿದೆ. ತನ್ನ ಹಕ್ಕುಗಳ ಸನದನ್ನು ಪಡೆದುಕೊಂಡಿದೆ. ಮಕ್ಕಳ ತಂದೆ ತಾಯಿಗಳಿಗೆ ಅದರ ಪರಿಚಯವು ಅಗತ್ಯವಾಗಿದೆ. 'ನಾವು ನಿರುಂಕುಶ ನಿರ್ಜರರು,' (ಹೊಯ್ಸಳ) 'ಮಕ್ಕಳು ಜೀವನ ಉದ್ಯಾನದಲ್ಲಿಯ ಸುಂದರ ಕುಸುಮಗಳು' 'ದೇವರ ರಾಜ್ಯವು ಮಕ್ಕಳಿಗಾಗಿಯೆ' ; ಇತ್ಯಾದಿ ಪ್ರಶಂಸೋಕ್ತಿಗಳನ್ನು ಮಕ್ಕಳ ಬಗ್ಗೆ ನಾವು ಆಗಾಗ್ಗೆ ಕೇಳುವದುಂಟು. ಯಾವುದೇ ಶಾಲೆಯ ಸಮಾರಂಭವಿರಲಿ, ಅದರಲ್ಲಿ ಯಾವುದೇ ವಿಧವಾಗಿ ಭಾಗವಹಿಸುವ ನಮ್ಮ ರಾಜಕೀಯ ಮುಂದಾಳುಗಳ ಪ್ರಾರಂಭದ ಘೋಷವಾಕ್ಯವಿದು:—'ಇಂದಿನ ಮಕ್ಕಳು ನಾಳಿನ ನಾಗರಿಕರು' 'ಮಕ್ಕಳೇ ರಾಷ್ಟ್ರದ ಅಮೂಲ್ಯ ಸಂಪತ್ತು'— ಇತ್ಯಾದಿ.

ಮಕ್ಕಳ ಮಹತಿಯ ಬಗ್ಗೆ ಸಭೆಗಳಲ್ಲಿ ಸುರಿಯುತ್ತಿರುವ ಈ ಸ್ತುತಿರೂಪವಾದ ಸುರಿಮಳೆ ವಾಸ್ತವ ಜೀವನದಲ್ಲಿ 'ಏನಾದರೂ ಸತ್ಫಲವನ್ನು ಮಕ್ಕಳಿಗಾಗಿ ನೀಡುತ್ತಿರುವುದೇ ?

ಮಕ್ಕಳು ಬೇಕು–ತಾಯಿತಂದೆಗಳಿಗೆ, 'ತಮಗಾಗಿ' ಬೇಕು ; ಆದರೆ ಅವರು 'ರಾಷ್ಟ್ರೀಯ ಸಂಪತ್ತು' ಎಂಬ ತಿಳುವಳಿಕೆ, ಎಷ್ಟು ಜನ ತಾಯಿ ತಂದೆಯರಿಗುಂಟು ? ಪ್ರಗತಿಪರವಾದ ಕೆಲವೊಂದು ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಮಕ್ಕಳು ನೈಜವಾದ, ಶಾಶ್ವತವಾದ ರಾಷ್ಟ್ರೀಯ ಸಂಪತ್ತೆಂಬ ಶ್ರದ್ಧೆಯು ಬಲವಾಗಿದೆ. ಮಗು ನಿರೋಗಿಯಾಗಿ, ಸುದೃಢನಾಗಿ ಬೆಳೆಯಬೇಕು ; ಅತನ ಶಾರೀರಕ ಹಾಗೂ ಮಾನಸಿಕ ಶಕ್ತಿಗಳ ಪರಿಪೂರ್ಣ ವಿಕಾಸವಾಗ ಬೇಕು–ಎಂಬುವ ಭಾವನೆಯೇ ಈ ದಕ್ಷತೆಗೆ ಕಾರಣವಾಗಿದೆ.

ಮಕ್ಕಳ ಮಹತಿಯನ್ನು ಎತ್ತಿ ತೋರಿಸಿ, ಅವರ ಬಗ್ಗೆ ವಿಚಾರ ಮಾಡಲು ಪ್ರಚೋದಿಸಿದ ಹಾಗೂ ಮಕ್ಕಳ ಶಿಕ್ಷಣದ ಬಗ್ಗೆ ಮೊಟ್ಟಮೊದಲು ವೈಚಾರಿಕ ಕ್ರಾಂತಿಯನ್ನುಂಟು ಮಾಡಿದ ಶ್ರೇಯಸ್ಸು ರೂಸೋನಿಗೆ ಸಲ್ಲುವುದು- 'Nature desires that children should be children before they are men'. (ಪ್ರಬುದ್ಧರಾಗುವ ಮೊದಲು ಮಕ್ಕಳು ಮಕ್ಕಳಾಗಿಯೆ ಬಾಳಬೇಕು ಎಂಬುದು ನಿಸರ್ಗದ ಅಪೇಕ್ಷೆಯಾಗಿದೆ).

(ಆಂತರಿಕವಾದ ನೈಸರ್ಗಿಕ ವಿಕಾಸವೇ ಮಕ್ಕಳ ಶಿಕ್ಷಣ). 'Education should be from within' (ಕಾಡಿನ ತರುಲತೆ ಗಳಂತೆ, ಮಕ್ಕಳು ಸ್ವಚ್ಛಂದವಾಗಿ, ಅನಿರ್ಬಂಧವಾಗಿ ಬೆಳೆಯ ಬೇಕು)-'to grow like an uncoerced plant'-ರೂಸೋನ ಸಮಗ್ರ ಶೈಕ್ಷಣಿಕ ಬರವಣಿಗೆಯಲ್ಲಿ ಧ್ವನಿತವಾಗುವುದು ಒಂದೇ ಒಂದು ವಿಚಾರ-ಅದೇದರೆ 'ಮಕ್ಕಳ ಸ್ವಾತಂತ್ರ್ಯ'. ಅದಕ್ಕೆ ಪ್ರತಿಯಾಗಿ ಸಾಂಪ್ರದಾಯಿಕ ಶಾಲೆಗಳಲ್ಲಿ ನಮಗೆ ಇಂದು ಕಂಡು ಬರುವುದು, ರೂಸೋನು ಹೇಳುವಂತೆ-'The age mirth is passed in the midst of tears, threats and

punishments' (ಮಕ್ಕಳ ವಸಂತ ಋತುವಾದ ಬಾಲ್ಯವು ಇಂದು 'ಕಣ್ಣೀರು, ಬೆದರಿಕೆ ಶಿಕ್ಷೆಗಳಲ್ಲಿ ಕಳೆದು ಹೋಗುತ್ತಿದೆ).

ರೂಸೋನು ಅಂದು ಬಿತ್ತಿದ ಮಕ್ಕಳ ಸ್ವಾತಂತ್ರ್ಯದ ಬೀಜವು ಇಂದು ಹೆಮ್ಮರವಾಗಿ ಬೆಳೆದು ನಿಂತಿದೆ. ಶಾಖೋಪ ಶಾಖೆಗಳಾಗಿ ಎಲ್ಲ ಪ್ರಾಗತಿಕ ದೇಶಗಳಲ್ಲಿ ಪಸರಿಸತೊಡಗಿದೆ. ಜಗತ್ತಿನ ಮಕ್ಕಳಿಗೆಲ್ಲ ಸುಮಧುರ ಫಲಗಳನ್ನು ನೀಡುತ್ತಿದೆ. ರಾಜಕೀಯ ಸ್ವಾತಂತ್ರ್ಯದ ಬಿರುಗಾಳಿಯೊಡನೆ ಮಕ್ಕಳ ಸ್ವಾತಂತ್ರ್ಯದ ಸುಳಿಗಾಳಿಯೂ ಸಮನ್ವಿತವಾಗಿ ಬೀಸತೊಡಗಿದೆ. ಜಗತ್ತಿನ ಮಕ್ಕಳಿಗೆಲ್ಲ ಸ್ವಾತಂತ್ರ್ಯದ ಹಾಗೂ ಅವರಿಗೆ ಮೀಸಲಾಗಿರುವ ಹಕ್ಕುಬಾಧ್ಯತೆಗಳ ಅಧಿಕೃತ ಸನದನ್ನು ತಂದು ಕೊಟ್ಟಿದೆ.

## 18. ಮಕ್ಕಳ ಸನದು

ಭಾರತದಲ್ಲಿ ಸ್ವಾತಂತ್ರ್ಯದ ಮೂರನೆಯ ದಶಕವು ಮುಗಿಯುತ್ತ ಬಂದಿದೆ. ರಾಷ್ಟ್ರದ ಭೌತಿಕ ಹಾಗೂ ಮಾನವ ಸಂಪತ್ತುಗಳನ್ನು ಅಭಿವೃದ್ಧಿಗೊಳಿಸಲು ವಿಧವಿಧದ ಯತ್ನ ಹಾಗೂ ಯೋಜನೆಗಳನ್ನು ಕೈಕೊಳ್ಳಲಾಗಿದೆ. ತಮ್ಮತಮ್ಮ ಅಂತಃಶಕ್ತಿಗಳ ಸಂಪೂರ್ಣ ವಿಕಾಸಕ್ಕಾಗಿ ಸರ್ವರಿಗೂ ಸುಸಂಧಿಯು ಸಮನಾಗಿ ದೊರೆಯಬೇಕೆಂಬುದು ರಾಷ್ಟ್ರದ ಪುನರ್ರಚನೆಯ ಮುಖ್ಯ ಗುರಿಯಾಗಿದೆ. ರಾಷ್ಟ್ರ ನಿರ್ಮಾಣದ ಈ ನೂತನ ಮಹಾಪರ್ವದಲ್ಲಿ ಮಕ್ಕಳನ್ನೂ ಮರೆಯುವಂತಿಲ್ಲ.

ಈ ನಿರ್ಮಾಣಕಾರ್ಯದಲ್ಲಿ, ಸಾಮಾಜಿಕವಾಗಿ ಹಾಗೂ ಆರ್ಥಿಕವಾಗಿ ಮಕ್ಕಳ ಪಾತ್ರವು ಅತ್ಯಂತ ಪ್ರಧಾನವಾಗಿದೆ.

ಮೊದಲಿನ ಆರು ವರುಷಗಳ ಪೂರ್ವಬಾಲ್ಯವು ಮಕ್ಕಳಿಗೆ ಅತ್ಯಂತ ಮಹತ್ವದ ಅವಧಿಯಾಗಿದೆ. ಅವರಿಗೆ ನಾವು ನೀಡುವ ಪರಿಸರದ ಪ್ರಭಾವದಿಂದ ಅವರ ವ್ಯಕ್ತಿತ್ವವು ರೂಪಗೊಳ್ಳು ವುದು. ಆದರೆ ಖೇದದ ಸಂಗತಿಯೆಂದರೆ, ಇಂದಿನ ನಮ್ಮ ರಾಷ್ಟ್ರೀಯ ಯೋಜನೆಗಳಲ್ಲಿ, ಈ ಶೈಶವದ ವಯೋಮಾನದ ಮಕ್ಕಳನ್ನು ಕಡೆಗಣಿಸಲಾಗಿದೆ. ಗ್ರಾಮೀಣ ಭಾಗಗಳಲ್ಲಿ ಯಂತೂ, ಈ ಮಕ್ಕಳ ಸ್ಥಿತಿಗತಿಯು ತೀರ ಶೋಚನೀಯ ವಾಗಿರುವುದು ; ಶೈಕ್ಷಣಿಕ ದೃಷ್ಟಿಯಿಂದಲಂತೂ ತೀರ ಪ್ರತಿ ಕೂಲವಾಗಿರುವುದು. ಆದರೆ ಬಹುಜನಸಮಾಜದ ಈ ಮಕ್ಕಳೇ ಭಾರತದ ನಾಳಿನ ನಾಗರಿಕರಾಗುವರೆಂಬುದನ್ನು ಮರೆಯುವಂತಿಲ್ಲ.

ಮಕ್ಕಳ ಕಲ್ಯಾಣಕ್ಕಾಗಿ ಒಂದು ಸುಯೋಜಿತ ವಿಧಾನ ವಿರಬೇಕೆಂಬುವುದು, ಸಾರ್ವತ್ರಿಕ ಬೇಡಿಕೆಯಾಗಿದೆ. ಆದರೆ ಆಡಳಿತವು ಈ ಬೇಡಿಕೆಯನ್ನು ಕಡೆಗಣಿಸಿರುವುದೇ ಹೆಚ್ಚಾಗಿ ಕಂಡು ಬರುವುದು. ಮಕ್ಕಳ ಬಗ್ಗೆ ಈ ಬೇಡಿಕೆಯನ್ನು ಮನ್ನಿಸುವುದು ಒದಗಿಸುವುದು ಅತ್ಯಗತ್ಯವಾಗಿದೆ.

ಮಕ್ಕಳು ಜಾತ್ಯತೀತರು, ಮತಪಂಥಗಳ ಸುಳಿಗೆ ಸಿಲುಕ ದವರು. ಅವರಲ್ಲಿ ವರ್ಣಭೇಧವಿಲ್ಲ. ಸಾಮಾಜಿಕ ಸ್ಥಾನ ಮಾನಗಳಲ್ಲಿಯ ವ್ಯತ್ಯಾಸವು ಎಳೆಯ ಮಕ್ಕಳ ಕೆಳೆತನಕ್ಕೆ, ಕೂಡುವಿಕೆಗೆ ಎನಿತೂ ಆತಂಕವಾಗುವುದಿಲ್ಲ. ಹಿರಿಯರು ನಡುವೆ ಬಾರದಿದ್ದರೆ, ಮಕ್ಕಳು ಪರಿಪೂರ್ಣವಾದ, ಪರಿಶುದ್ಧವಾದ ಸ್ವಾತಂತ್ರ್ಯದ ವಾತಾವರಣದಲ್ಲಿ ನಡೆದುಕೊಳ್ಳುವರು. ಮಕ್ಕಳು ಯಾವ ಪಕ್ಷ ಪಂಗಡಗಳಿಗೂ ಹೊಂದಿಕೊಂಡವರಲ್ಲ. ಯಾವ

'ಇಜಂ' (ism) ದ ಇಕ್ಕಳವೂ ಅವರನ್ನು ಸಂಕುಚಿತಗೊಳಿಸ ಲಾರದು. ಯಾವ ಗುಂಪಿಗೂ ಸೇರದ ಈ ಶುದ್ಧ ಜೀವಿಗಳು ನಾಡಿನ ಶಿದ್ಧವಾದ ಸಂತಾನ ಸಂಪತ್ತು. ಆದುದರಿಂದ ಮಕ್ಕಳ ಕಲ್ಯಾಣದ ಬಗೆಗಿನ ಬೇಡಿಕೆಗಳನ್ನು ತಾತ್ವಿಕವಾಗಿ ಮಾತ್ರ ಮನ್ನಿಸದೆ ಅವುಗಳನ್ನು ಕಾರ್ಯಗತಗೊಳಿಸಬೇಕಾಗುವುದು.

ಚಿಕ್ಕಮಕ್ಕಳ ಪರಿಪೂರ್ಣ ವಿಕಾಸಕ್ಕೆ ಅಗತ್ಯವಿರುವ ಬೇಡಿಕೆಗಳನ್ನು ಒದಗಿಸುವುದು, ರಾಷ್ಟ್ರದ ಹೊಣೆಗಾರಿಕೆಗಳಲ್ಲಿ ಒಂದಾಗಿದೆ. ಚಿಕ್ಕಮಕ್ಕಳು ರಾಷ್ಟ್ರದ ಬಹುಮೋಲ ಗೊತ್ತಾಗಿರುವರು. ಮಾಡಿದಂತೆ ಆಗುವ ಮಿದುಮನದ ಎಳೆಯ ವಯೋಮಾನದಲ್ಲಿ ಮಕ್ಕಳ ಶಾರೀರಿಕ, ಮಾನಸಿಕ ಹಾಗೂ ಭಾವನಿಕ ಬೇಡಿಕೆಗಳನ್ನು ಸಮಯೋಚಿತವಾಗಿ ಒದಗಿಸುವುದು, ರಾಷ್ಟ್ರದ ಉಜ್ವಲವಾದ ಭವಿಷ್ಯತ್ತಿಗೆ ಸುನಿಶ್ಚಿತವಾದ ಸಾಧನವಾಗಿರುವುದು. ಅದು ದೀರ್ಘಾವಧಿಯ ಲಾಭದಾಯಕ ಉದ್ದಿಮೆಯಲ್ಲಿ ಹಣತೊಡಗಿಸಿದಂತೆ ; ರಾಷ್ಟ್ರದ ಬಹುಮುಖವಾದ ಅಭ್ಯುದಯಕ್ಕೆ, ಆದರ್ಶಭೂತವಾದ ಸಂಸ್ಕೃತಿಗೆ ಭದ್ರವಾದ ತಳಹದಿಯನ್ನು ಹಾಕುವುದೇ ರಾಷ್ಟ್ರವು ಕೈಕೊಳ್ಳುವ ಮಹತ್ವದ ಕಾರ್ಯಕ್ರಮಗಳಲ್ಲಿ ಒಂದಾಗಿದೆ.

ಮಕ್ಕಳ ಹಕ್ಕುಗಳಿಗೆ ಬೇಡಿಕೆಗಳಿಗೆ ಇಂದು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮನ್ನಣೆ ದೊರೆತಿದೆ, ಪುರಸ್ಕಾರವು ಪ್ರಾಪ್ತವಾಗುತ್ತಲಿದೆ. ಉದಾಹರಣೆಗಾಗಿ 'ಮಕ್ಕಳ ಹಕ್ಕುಗಳ ಘೋಷಣೆ'ಯೆಂಬುದು ಮಕ್ಕಳ ಬೇಡಿಕೆಗಳಿಗೆ ದೊರೆತಿರುವ ಜಾಗತಿಕ ಯಶಸ್ವಿತೆಯ ಕುರುಹಾಗಿದೆ. ಈ ಪ್ರಕಟನೆಯು '1948ರ ಜಿನೇವಾ ಘೋಷಣೆ'ಯೆಂದು ಪ್ರಸಿದ್ಧವಾಗಿದೆ.

'ಸಂಯುಕ್ತ ರಾಷ್ಟ್ರಗಳ ಅಂತರ ರಾಷ್ಟ್ರೀಯ ಚಿಕ್ಕಮಕ್ಕಳ ಆಪದ್ಧನ' (*United Nations International Childrens' Emergency Fund*) ವೆಂಬುದು ಜಾಗತಿಕ ಮಕ್ಕಳ ನೆರವಿಗಾಗಿ ನಿರ್ಮಿಸಿದ ಒಂದು ಮಹಾಸಂಸ್ಥೆಯಾಗಿದೆ. 'ಪ್ರಪಂಚದ ಅವಿಕಸಿತ ಪ್ರದೇಶಗಳಲ್ಲಿ' ವಾಸಿಸುವ ಮಕ್ಕಳ ಸರ್ವತೋಮುಖ ವಾದ ಕಲ್ಯಾಣದ ಕಾರ್ಯಗಳನ್ನು ಈ ಸಂಸ್ಥೆಯು ಕೈಕೊಳ್ಳು ತ್ತದೆ. ಎರಡನೆಯ ಮಹಾಯುದ್ಧಯಲ್ಲಿ ನಷ್ಟಕ್ಕೊಳಗಾದ ನಿರಾಶ್ರಿತ ಮಕ್ಕಳಿಗೆ ಸಹಾಯ ಮಾಡಲು ಮೊದಲು ಈ ಸಂಸ್ಥೆ ಉದಯವಾಯಿತು. ಇಂದು ಮಕ್ಕಳ ಹಿತಕ್ಕಾಗಿ ಕಾರ್ಯ ಮಾಡುವ ಅದೊಂದು ಶಾಶ್ವತ ಸ್ವರೂಪದ ಸಂಸ್ಥೆಯಾಗಿದೆ. ಮಕ್ಕಳಿಗೆ ದೊರೆತ ಈ ಅಧಿಕಾರಪತ್ರವನ್ನು ಪ್ರಪಂಚದ ಎಲ್ಲ ರಾಷ್ಟ್ರಗಳೂ ಸ್ವಾಗತಿಸಿವೆ.

ಮಕ್ಕಳ ಹಕ್ಕುಗಳು ಜಾತಿ ಮತ ಪಂಥಗಳಿಗೆ ಅತೀತವಾಗಿವೆ. ಅವುಗಳ ಮರ್ಯಾದೆಯನ್ನು ಮೀರಿ ನಿಲಿಸಿವೆ ಯೆಂಬುದು ಈ ಸನದಿನ ಮೊಟ್ಟ ಮೊದಲನೆಯ ಕಲಮು ಆಗಿರುವುದು – ಇದೇ ವಿಚಾರಧಾರೆಗೆ ಹೊಂದಿಕೊಂಡು 'ಮಕ್ಕಳಿಗಾಗಿ ಅಖಿಲ ಭಾರತೀಯ ಸನದು' ಅನತಿದೂರ ಕಾಲದಲ್ಲಿಯೆ ನಿರ್ಮಾಣವಾಗುವ ಹಂತದಲ್ಲಿದೆ.

'ಮಕ್ಕಳಿಗಾಗಿ ಅಖಿಲಭಾರತೀಯ ಸನದನ್ನು ರಚಿಸುವುದ ರಲ್ಲಿ ಅನೇಕ ಪ್ರಯೋಜನಗಳಿವೆ: 1. ಈ ಸನದಿನ ಉದ್ದೇಶವು ಗಾಂಭೀರ್ಯ,ಕಳಕಳಿಯಿಂದ ಯುಕ್ತವಾಗಿದೆ. ಈ ಉದ್ದೇಶವನ್ನು ಯಾರೂ ಮರೆಯಲಾರರು, ಕಡೆಗಣಿಸಲಾರರು; 2. ಮಕ್ಕಳ ಸಮಸ್ಯೆಗಳ ಬಗ್ಗೆ, ಅವರಿಗೆ ಕಲ್ಯಾಣಕರವಾದ ಸಂಗೀತಗಳ

ುಗ್ಗೆ ರಾಷ್ಟ್ರದ ಹಾಗೂ ಜನತೆಯ ಆಸ್ಥೆ ಲಕ್ಷ್ಯಗಳನ್ನು ಈ
ದಿನದು ಸೆಳೆಯುತ್ತಿದೆ; 3. ಮಕ್ಕಳಿಗೆ ಕಲ್ಯಾಣಕರವಾದ
ಯೋಜನೆಗಳನ್ನು ಏರ್ಪಡಿಸಿ, ಪ್ರಯೋಗ-ಪರೀಕ್ಷಣಗಳಿಂದ
ಅವುಗಳ ಪರಿಣಾಮವನ್ನು ಕಂಡುಹಿಡಿಯುತ್ತದೆ. ಪಂಡಿತ
ನೆಹರೂರವರ ಮಕ್ಕಳ ಮೇಲಿನ ಮಮತೆಯ ಸವಿನೆನಪಿಗಾಗಿ
ಅವರ ಜಯಂತಿಯು ಇಂದು **'ಮಕ್ಕಳ ದಿನ'**ವಾಗಿ ರಾಷ್ಟ್ರ
ದಾದ್ಯಂತ ಆಚರಿಸಲ್ಪಡುತ್ತದೆ. ಮಕ್ಕಳ ಹಿತೈಷಿಗಳು ಅಂದು
ಆತ್ಮಪರೀಕ್ಷೆ ಮಾಡಿಕೊಳ್ಳಬೇಕು. ರಾಷ್ಟ್ರೀಯ ಸರಕಾರವೂ
ಮಕ್ಕಳಿಗಾಗಿ ತಾವು ಮಾಡುತ್ತಿರುವ ಕಾರ್ಯದ ಸಿಂಹಾವಲೋಕ
ನನ್ನು ಅಂದು ಮಾಡಬೇಕು : 'ಮಕ್ಕಳು ಪಡೆದುಕೊಂಡಿರುವ
ಸನದಿನಲ್ಲಿಯ ಎಷ್ಟು ಸಂಗತಿಗಳು ಇಂದು ಮಕ್ಕಳಿಗೆ ದೊರೆತಿವೆ?
ಆರೋಗ್ಯ, ಅಭಿವೃದ್ಧಿ, ಶಿಕ್ಷಣ ಹಾಗೂ ಸಂಸ್ಕೃತಿಗಳಿಗಾಗಿ
ಯಾವ ಯಾವ ಸೌಲಭ್ಯಗಳು ಅವರಿಗೆ ಪ್ರಾಪ್ತವಾಗಿದೆ ?
ಯಾವ ಅವಕಾಶಗಳು ಭೇದಭಾವವಿಲ್ಲದೆ ಅವರಿಗೆ ಮುಕ್ತ
ವಾಗಿವೆ? ಈ ಪ್ರಶ್ನೆಗಳನ್ನು ಜನತೆ ಹಾಗೂ ಸರಕಾರ,ಇಬ್ಬರೂ
ಎದುರಿಸಬೇಕಾಗುವುದು; ಅವುಗಳಿಗೆ ಸಮರ್ಪಕವಾದ ಉತ್ತರ
ಳನ್ನೀಯುವಂತೆ ಯೋಜನೆಗಳನ್ನು ಕೈಕೊಳ್ಳಬೇಕಾಗುವುದು.
ಇಲ್ಲವಾದರೆ ಮಕ್ಕಳ ದಿನವೂ ಪರಂಪರೆಯ ಹಬ್ಬ ಇಲ್ಲವೇ
ಸಮಾರಂಭದಂತೆ ಒಂದು ಔಪಚಾರಿಕ ಉತ್ಸವವಾಗಿ ಉಳಿಯು
ವುದು.

ಈ ಸಂದರ್ಭದಲ್ಲಿ ಮಕ್ಕಳು ತಮ್ಮ ಸನದಿನಲ್ಲಿ ಯಾವ
ಹಕ್ಕುಗಳನ್ನು ಪಡೆದುಕೊಂಡಿರುವರು ? ಮಕ್ಕಳ ಸನದಿನ
ಹಿನ್ನೆಲೆಯೇನು ? ಎಂಬುದನ್ನು ಮಕ್ಕಳ ಹಿತೈಷಿಗಳೆಲ್ಲರೂ
ತಿಳಿದುಕೊಳ್ಳುವುದು ಸಮಂಜಸವಾಗಿದೆ.

1959 ನವೆಂಬರ್ 20 ರಂದು ಸಂಯುಂಕ್ತ ರಾಷ್ಟ್ರಗಳ ಸಾಮಾನ್ಯ ಸಭೆಯು **'ಮಕ್ಕಳ ಹಕ್ಕುಗಳ ಘೋಷಣೆ'**ಯನ್ನು ಅಂಗೀಕರಿಸಿತು ; ಅದನ್ನು ಸಾರ್ವಜನಿಕವಾಗಿ ಪ್ರಕಟಿಸಿತು. ಜಗತ್ತಿನಲ್ಲಿ ಜನ್ಮತಳೆದ ಪ್ರತಿಯೊಂದು ಮಗುವಿಗೂ ಕೆಲವೊಂದು ಹಕ್ಕುಗಳನ್ನೂ ಸ್ವಾತಂತ್ರ್ಯವನ್ನೂ ಈ ಘೋಷಣೆಯಲ್ಲಿ ನೀಡಲಾಗಿದೆ. ಈ ಸ್ವಾತಂತ್ರ್ಯ ಹಾಗೂ ಹಕ್ಕುಗಳ ಉಪಭೋಗಕ್ಕೆ ಜಾತಿ,ಮತ, ಪಂಥ ಇಲ್ಲವೇ ಮೈಬಣ್ಣವು ಆತಂಕವಾಗಲಾರದು. ಪ್ರಪಂಚದಲ್ಲಿಯ ಯಾವುದೇ ಮಗು ಸನದಿನಿಂದ ಪ್ರದತ್ತವಾದ ಈ ಹಕ್ಕಿಗೆ ಹೊರತಾಗಲಾರದು. ಅಂತರ್‌ರಾಷ್ಟ್ರೀಯ ಸಾಮಾಜಿಕ ಸಮಿತಿಯು ಮಗುವಿನ ಈ ಹಕ್ಕುಗಳನ್ನು ಸರ್ವಮಾನ್ಯವಾಗಿ ಒಪ್ಪಿಕೊಂಡಿದೆ.

ಮಕ್ಕಳ ಹಕ್ಕಿನ ಸನದಿನ ಸ್ಥೂಲ ಪರಿಚಯವನ್ನಾದರೂ ಇಲ್ಲಿ ಮಾಡಿಕೊಡುವುದು ಅಗತ್ಯವಾಗಿದೆ. ಈ ಸನದಿನ ಹಿನ್ನೆಲೆಯಾಗಿ, ಪೂರ್ವ ಪೀಠಿಕೆಯಲ್ಲಿ ಕೆಲವೊಂದು ಸಿದ್ಧಾಂತಗಳನ್ನು ಉಲ್ಲೇಖಿಸಲಾಗಿದೆ : 1. ಸಂಯುಕ್ತ ರಾಷ್ಟ್ರಗಳ ಜನಾಂಗಗಳು ಮಾನವನ ಮೂಲಭೂತ ವ್ಯಕ್ತಿತ್ವದ ಬಗ್ಗೆ ತಮ್ಮ ನಿಷ್ಠೆಯನ್ನು ಪುನರ್ಘೋಷಿಸಿರುವುದು. ಸಾಮಾಜಿಕ ಪ್ರಗತಿಯನ್ನು ತ್ವರಿತಗೊಳಿಸಲು, ಜೀವನದ ಮಟ್ಟವನ್ನು ಉನ್ನತಗೊಳಿಸಲೂ ನಿರ್ಧಾರ ಮಾಡಿರುವರು. 2. ಸಂಯುಕ್ತ ರಾಷ್ಟ್ರ ಸಂಘವು ಉದ್ದೇಶಿಸಿರುವ 'ಮಾನವ ಹಕ್ಕುಗಳ ಪ್ರಕಟಣೆ'ಯಲ್ಲಿ ನಿವೇದಿಸಿದ ಎಲ್ಲ ಹಕ್ಕುಗಳೂ, ಎಲ್ಲ ಬಗೆಯ ಸ್ವಾತಂತ್ರ್ಯಗಳೂ ಜಾತಿ, ಬಣ್ಣ, ಗಂಡು-ಹೆಣ್ಣು, ಭಾಷೆ, ಮತ, ರಾಜಕೀಯ ವಿಚಾರ ಪ್ರಣಾಲಿ, ಆಸ್ತಿ, ಹುಟ್ಟು-ಇವೇ ಮುಂತಾದ ಯಾವ ಭೇದಭಾವಗಳಿಗೂ ಒಳಗಾಗದೆ, ಪ್ರತಿ

ಯೊಬ್ಬ ಮಾನವನಿಗೂ ಸರಿಸಮಾನವಾಗಿ ದೊರೆಯತಕ್ಕವುಗಳು. 3. ಚಿಕ್ಕಮಗುವಿನ ಶಾರೀರಕ ಹಾಗೂ ಮಾನಸಿಕ ಶಕ್ತಿಗಳು ಇನ್ನೂ ಅವಿಕಸಿತ ಅಪಕ್ವದೆಸೆಯಲ್ಲಿ ಇರುವವು. ಆದುದರಿಂದ ಮಗುವಿಗೆ ವಿಶಿಷ್ಟವಾದ, ಪ್ರತ್ಯೇಕವಾದ ಆರೈಕೆ ಹಾಗೂ ಕಾನೂನಿನ ರಕ್ಷಣೆಗಳು ಆತನು ಹುಟ್ಟುವ ಮೊದಲು, ಹಾಗೂ ಅನಂತರ ತೀರ ಅಗತ್ಯವಾಗಿವೆ. 4. 1924ರ ಜಿನೇವಾದ ಮಕ್ಕಳ ಹಕ್ಕುಗಳ ಸನದಿನಲ್ಲಿ ಈ ವಿಶಿಷ್ಟ ರಕ್ಷಣೆಗಳ ಬಗ್ಗೆ ಮನ್ನಣೆ ನೀಡಲಾಗಿದೆ. ಮಾನವನ ಮೂಲಭೂತ ಹಕ್ಕುಗಳ ಬಗ್ಗೆ ವಿಶ್ವಸಂಸ್ಥೆಯ ಪ್ರಕಟಣೆಯಲ್ಲಿ ಹಾಗೂ ಮಕ್ಕಳ ಹಿತಕ್ಕಾಗಿ ನಿರ್ಮಿತವಾದ, ಉಳಿದ ಅಂತರರಾಷ್ಟ್ರೀಯ ಸಮಿತಿಗಳ ನಿಯಮಾವಳಿಗಳಲ್ಲಿ ಈ ರಕ್ಷಣೆಗಳಿಗೆ ಅವಕಾಶಕೊಡಲಾಗಿದೆ. 5. ಇದುವರೆಗೆ ಬೆಳಸಿಕೊಂಡು, ಉಳಿಸಿಕೊಂಡು ಬಂದಿರುವ ಉತ್ತಮೋತ್ತಮವಾದುದೆಲ್ಲವನ್ನು ಮಗುವಿಗೆ ಒದಗಿಸುವುದು ಮಾನವ ಜನಾಂಗದ ಕರ್ತವ್ಯವಾದುದರಿಂದ, ರಾಷ್ಟ್ರ ಸಂಘದ ಸಾಮಾನ್ಯ ಸಮಿತಿಯು 'ಮಕ್ಕಳ ಹಕ್ಕುಗಳ ಜಾಹೀರನಾಮೆ' ಯನ್ನು ಪ್ರಕಟಿಸಿದೆ : ಮಗುವಿನ ಬಾಲ್ಯವು ಸುಖಮಯವಾಗಬೇಕು. ಆ ಪ್ರಕಟನೆಯಲ್ಲಿ ನಿರೂಪಿಸಲಾದ ಹಕ್ಕುಗಳನ್ನು ಹಾಗೂ ಸ್ವಾತಂತ್ರ್ಯಗಳನ್ನು ಸ್ವಂತದ ಹಿತಕ್ಕಾಗಿ, ಸಮಾಜದ ಕಲ್ಯಾಣಕ್ಕಾಗಿ ಮಗು ಉಪಭೋಗಿಸಬೇಕು—ಇದುವೆ ಈ ಜಾಹೀರುನಾಮೆಯ ಉದ್ದೇಶವಾಗಿದೆ. 'ಮಕ್ಕಳ ಈ ಹಕ್ಕುಗಳನ್ನು ಮನ್ನಿಸಬೇಕು. ಕಾನೂನು ಹಾಗೂ ಉಳಿದ ಉಪಾಯಗಳಿಂದ ಅವುಗಳನ್ನು ಕೃತಿರೂಪದಲ್ಲಿ ತರಬೇಕು'— ಎಂದು ಮಕ್ಕಳ ತಾಯಿ ತಂದೆಗಳಿಗೆ, ವ್ಯಕ್ತಿಶಃ ಸ್ತ್ರೀ ಪುರುಷರಿಗೆ,

ಸಾರ್ವಜನಿಕ ಸೇವಾ ಸಂಘಗಳಿಗೆ, ಸ್ಥಾನಿಕ ಸಂಸ್ಥೆಗಳಿಗೆ ಹಾಗೂ ರಾಷ್ಟ್ರೀಯ ಸರಕಾರಗಳಿಗೆ ಈ ಸಂಸ್ಥೆಯು ಆಹ್ವಾನಿಸಿದೆ.

ಈ ಕಾರ್ಯಕ್ಕಾಗಿ ಕೆಲವು ತತ್ವಗಳನ್ನೂ ನಿರೂಪಿಸಲಾಗಿದೆ :

1. ಜಾತಿ ಮತ, ವರ್ಣ, ಭಾಷೆ, ಹುಟ್ಟು ಮುಂತಾದ ಯಾವ ಭೇದಭಾವವಿಲ್ಲದೆ ಯಾವುದೇ ಪಕ್ಷಪಾತವಿಲ್ಲದೆ ತನಗೆ ನೀಡಲಾದ ಹಕ್ಕುಗಳನ್ನು ಮಗು ನಿರಾತಂಕವಾಗಿ ಉಪಯೋಗಿಸಬಲ್ಲದು.

2. ಸ್ವಾತಂತ್ರ್ಯ ಹಾಗೂ ಗೌರವಾನ್ವಿತ ಪರಿಸರದಲ್ಲಿ ತನ್ನ ಶಾರೀರಿಕ, ಮಾನಸಿಕ, ನೈತಿಕ, ಆಧ್ಯಾತ್ಮಿಕ ಹಾಗೂ ಸಾಮಾಜಿಕ ವಿಕಾಸವನ್ನು ಸಾಧಿಸಲು ಮಗುವಿಗೆ ವಿಶೇಷ ರಕ್ಷಣೆ ದೊರೆಯಬೇಕು; ವಿಶಿಷ್ಟ ಸದವಕಾಶಗಳನ್ನು ಹಾಗೂ ಸೌಕರ್ಯಗಳನ್ನು ಒದಗಿಸಬೇಕು. ಈ ಉದ್ದೇಶದ ಪೂರ್ತಿಗಾಗಿ ವಿಧಿಸುವ ಕಾನೂನುಗಳಲ್ಲಿ ಮಗುವಿನ ಹಿತಾಸಕ್ತಿಗಳಿಗೇನೇ ಪೂರ್ಣವಾದ ಪ್ರಾಧಾನ್ಯತೆ ನೀಡಬೇಕು.

3. ಹುಟ್ಟಿದಂದಿನಿಂದಲೆ ಮಗುವಿಗೆ ಒಂದು ಹೆಸರು ಹಾಗೂ ಒಂದು ರಾಷ್ಟ್ರೀಯತೆಯ ಅಧಿಕಾರವು ಪ್ರಾಪ್ತವಾಗುವುದು.

4. ಮಗುವಿಗೆ ಸಾಮಾಜಿಕ ಭದ್ರತೆ ಪ್ರಯೋಜನಗಳು ದೊರೆಯಬೇಕು. ಮಗು ನಿರೋಗಿಯಾಗಿ ಬೆಳೆದು ದೊಡ್ಡವನಾಗಬೇಕು. ಈ ಉದ್ದೇಶಕ್ಕಾಗಿ ಆತನಿಗೂ, ಆತನ ತಾಯಿಗೂ ಮಗು ಗರ್ಭದಲ್ಲಿರುವಾಗ ಹಾಗೂ ಅನಂತರ ಸಾಕಷ್ಟು ವಿಶೇಷ ರಕ್ಷಣೆ ಹಾಗೂ ಆರೈಕೆಗಳನ್ನು ಒದಗಿಸಬೇಕು. ಪೌಷ್ಟಿಕ ಆಹಾರ

ಒಳ್ಳೇ ಆಸರೆ, ಮನರಂಜನೆಯ ಸಾಧನಗಳು ಹಾಗೂ ಔಷಧೀಯ ಉಪಚಾರಗಳು ಮಗುವಿಗೆ ಸಾರ್ವತ್ರಿಕವಾಗಿ ದೊರೆಯಬೇಕು.

5. ಶಾರೀರಿಕ, ಮಾನಸಿಕ ಹಾಗೂ ಸಾಮಾಜಿಕ ನ್ಯೂನತೆ ಅಡೆತಡೆಗಳಿಂದ ಬಳಲುವ ಮಗುವಿಗೆ, ಅವರವರಿಗೆ ಅಗತ್ಯ ವಿರುವ ವಿಶಿಷ್ಟ ಉಪಚಾರ, ಆರೈಕೆ ಹಾಗೂ ಶಿಕ್ಷಣಗಳ ಸೌಲಭ್ಯವಿರಬೇಕು.

6. ಮಗುವಿನ ಪರಿಪೂರ್ಣವಾದ ಹಾಗೂ ಸಮನ್ವಿತ ವಿಕಾಸಕ್ಕೆ ಆತನ ಬಗ್ಗೆ ಸರಿಯಾದ ತಿಳುವಳಿಕೆ ಹಾಗೂ ಸತತ ವಾದ ಪ್ರೀತಿಯ ಧಾರೆ ಅತ್ಯಗತ್ಯವಾದವುಗಳು. ಸಾಧ್ಯವಿರುವ ಲೆಲ್ಲ ತಾಯಿತಂದೆಗಳ ಆರೈಕೆ ಹಾಗೂ ಹೊಣೆಗಾರಿಕೆಗಳಲ್ಲಿಯೆ ಮಗು ಬೆಳೆದು ದೊಡ್ಡವನಾಗಬೇಕು. ಮಗು ಹೇಗೆ ಬೆಳೆದರೂ ಸರಿ. ಆತನಿಗೆ ಪ್ರೀತಿಯ ಭದ್ರತೆಯಿರಬೇಕು. ನೀತಿಯ ರಕ್ಷಣೆ ಬೇಕು ; ಜೀವನದ ಸೌಕರ್ಯಗಳ ಪೂರ್ಣ ಭರವಸೆಯಿರ ಬೇಕು. ಅಪವಾದಾತ್ಮಕ ಸಂದರ್ಭಗಳನ್ನು ಬಿಟ್ಟರೆ, ಎಳೆಯ ಮಗುವನ್ನು ತಾಯಿಂದ ಎಂದಿಗೂ ಅಗಲಿಸಬಾರದು. ಕುಟುಂಬದ ಆಸರವಿಲ್ಲದ ಇಲ್ಲವೆ ಸರಿಯಾದ ಆರೈಕೆ ದೊರೆಯ ಲಾರದ ಮಕ್ಕಳಿಗಾಗಿ ವಿಶೇಷವಾದ ಯೋಜನೆಗಳನ್ನು ಮಾಡು ವುದು ಜನತೆಯ ಹಾಗೂ ಸರಕಾರದ ಕರ್ತವ್ಯವಾಗಿದೆ. ಅಧಿಕ ಸಂಖ್ಯೆಯಲ್ಲಿ ಮಕ್ಕಳಿರುವ ಕುಟುಂಬಗಳಿಗೆ ಮಕ್ಕಳ ಜೋಪಾಸನೆಗಾಗಿ ಸರಕಾರವು ಹಾಗೂ ಸಾರ್ವಜನಿಕ ಸಂಸ್ಥೆಗಳು ಆರ್ಥಿಕ ನೆರವನ್ನು ನೀಡುವುದು ಅಪೇಕ್ಷಿತವಾಗಿದೆ.

7. ಕನಿಷ್ಟಪಕ್ಷಕ್ಕೆ ಪ್ರಾಥಮಿಕ ಮೆಟ್ಟಿಲಿನಲ್ಲಿಯಾದರೂ, ಉಚಿತ ಹಾಗೂ ಒತ್ತಾಯದ ಶಿಕ್ಷಣವನ್ನು ಪಡೆಯುವುದು

ಮಗುವಿನ ಹಕ್ಕಾಗಿದೆ. ಮಗುವಿಗೆ ಕೊಡುವ ಶಿಕ್ಷಣವು ಆತನ ಸಾಮಾನ್ಯ ಸಂಸ್ಕೃತಿಗೆ ಪೋಷಕವಾಗಿರಬೇಕು. ಎಲ್ಲರಿಗೂ ಸರಿ ಸಮಾನವಾದ ಸದವಕಾಶವೆಂಬ ತಳಹದಿಯಮೇಲೆ ಮಗುವಿನ ಎಲ್ಲ ಬಗೆಯ ಸಹಜ ಶಕ್ತಿಗಳ ಸಮನ್ವಿತ ವಿಕಾಸವಾಗುವಂತಿರಬೇಕು. ಆತನ ಸ್ವಂತದ ವಿವೇಚನಾಶಕ್ತಿ ಹಾಗೂ ನೈತಿಕ, ಸಾಮಾಜಿಕ ಹೊಣೆಗಾರಿಕೆಯ ಅರಿವು ಅಧಿಕವಾಗಿ ಅಭಿವೃದ್ಧಿಯನ್ನು ಪಡೆಯಬೇಕು. ಒಟ್ಟು ಸಮಾಜದಲ್ಲಿ ಆತನೂ ಒಬ್ಬ ಉಪಯುಕ್ತ ಸದಸ್ಯನಾಗುವಂತೆ ಶಿಕ್ಷಣವು ಮಗುವನ್ನು ಅಣಿಗೊಳಿಸಬೇಕು.

ಮಗುವಿನ ಅತ್ಯಂತ ಹಿತವೇ ಮಗುವಿನ ಶಿಕ್ಷಣ ಹಾಗೂ ಪ್ರಗತಿಯ ಹೊಣೆಯನ್ನು ವಹಿಸುವವರಿಗೆ ಮಾರ್ಗದರ್ಶಕ ತತ್ವವಾಗಿರಬೇಕು.

ಆಟಪಾಟಗಳಿಗಾಗಿ, ಮನರಂಜನೆಯ ಕಾರ್ಯಕ್ರಮಗಳಿಗಾಗಿ ಮಗುವಿಗೆ ಪೂರ್ಣ ಸದವಕಾಶವು ದೊರೆಯಬೇಕು. ಅವುಗಳೆಲ್ಲವೂ ಶೈಕ್ಷಣಿಕ ಉದ್ದೇಶಗಳಿಂದಲೇ ಪ್ರೇರಿತವಾಗಬೇಕು. ಆಟಪಾಟಗಳ ಈ ಹಕ್ಕನ್ನು ಉಪಭೋಗಿಸಲು ಸಮಾಜ ಹಾಗೂ ಸರಕಾರ ಎಲ್ಲ ಬಗೆಯ ಪ್ರೋತ್ಸಾಹವನ್ನು ನೀಡಬೇಕು.

8. ಅನುವು ಆಪತ್ತುಗಳ ಬಿಕ್ಕಟ್ಟಿನಲ್ಲಿ, ರಕ್ಷಣೆ ಹಾಗೂ ಸಹಾಯಗಳು ಮೊಟ್ಟಮೊದಲು ಮಗುವಿಗಾಗಿ ಮೀಸಲಾಗಿರಬೇಕು.

9. ಎಲ್ಲಬಗೆಯ ನಿಷ್ಕಾಳಜಿತನ, ನಿರ್ದಯತೆ ಹಾಗೂ ಶೋಷಣೆಗಳಿಂದ ಮಗುವಿಗೆ ರಕ್ಷಣೆ ದೊರೆಯಬೇಕು. ಯಾವ ಬಗೆಯಲ್ಲಿಯೂ ಮಗು ಮಾರಾಟದ ವಸ್ತುವಾಗಕೂಡದು.

ಸಮಂಜಸವಾದ ಕನಿಷ್ಠ ವಯೋಮಾನದವರೆಗೆ ಮಗುವನ್ನು ಕೆಲಸಕ್ಕೆ ಹಚ್ಚಕೂಡದು. ಎಂಥ ಪರಿಸ್ಥಿತಿಯಲ್ಲಿಯೂ ಆತನ ಆರೋಗ್ಯಕ್ಕೆ, ಶಿಕ್ಷಣಕ್ಕೆ ಬಾಧೆಯುಂಟುಮಾಡುವ ಇಲ್ಲವೆ ಆತನ ಶಾರೀರಕ, ಮಾನಸಿಕ ಹಾಗೂ ನೈತಿಕ ಅಭಿವೃದ್ಧಿಗೆ ಆತಂಕವನ್ನುಂಟುಮಾಡುವ ಯಾವುದೇ ದುಡಿಮೆಯಲ್ಲಿ ಮಗುವನ್ನು ತೊಡಗಿಸಕೂಡದು.

10. ಮತ ಮತಗಳಲ್ಲಿ ಜನಾಂಗ ಜನಾಂಗಗಳಲ್ಲಿ ಭೇದ ಬುದ್ಧಿಯನ್ನು ಬೆಳೆಸುವ ಇಲ್ಲವೇ ಬೇರೊಂದು ರೂಪದಲ್ಲಿ ಭೇದ ಭಾವನೆಯನ್ನುಂಟುಮಾಡುವ ರೂಢಿ ಹಾಗೂ ಆಚಾರಗಳ ಬಲಿಯಲ್ಲಿ ಸಿಲುಕದಂತೆ ಮಗುವನ್ನು ಜಾಗರೂಕತೆಯಿಂದ ನೋಡಿಕೊಳ್ಳಬೇಕು. ತನ್ನ ಬುದ್ಧಿ ಹಾಗೂ ಉತ್ಸಾಹಗಳು ತನ್ನ ಸಹಬಾಂಧವರ ಸೇವೆಗಾಗಿ ವಿನಿಯೋಗಿಸಲ್ಪಡಬೇಕು— ಎಂಬ ಅರಿವು ಮಗುವಿನಲ್ಲಿ ಸಂಪೂರ್ಣವಾಗಿರಬೇಕು. ಆದುದರಿಂದ ಪರಸ್ಪರ ಸರಿಯಾದ ತಿಳುವಳಿಕೆ, ಸಹಿಷ್ಣುತೆ, ಎಲ್ಲ ಜನರೊಡನೆಯೂ ಸೌಹಾರ್ದದ ಭಾವನೆ, ಶಾಂತಿ ಹಾಗೂ ವಿಶ್ವಬಾಂಧವ್ಯ, ಈ ಸಾಮಾಜಿಕ ಸದ್ಗುಣಗಳ ವಾತಾವರಣದಲ್ಲಿ ಮಗುವನ್ನು ಬೆಳೆಸಿಕೊಂಡು ಬರಬೇಕು.

ಪ್ರಗತಿಪರ ರಾಷ್ಟ್ರಗಳು ಎಳೆಯ ಮಕ್ಕಳ ಸರಿಯಾದ ಪೋಷಣೆಯ ಮಹತಿಯನ್ನು ತಿಳಿದುಕೊಂಡಿವೆ. ಈ ಮಹತಿಯನ್ನು ಆಧರಿಸಿಯೆ ಸಂಯುಕ್ತರಾಷ್ಟ್ರಸಂಘವು ಮಕ್ಕಳ ಹಕ್ಕಿನ ಸನದಿನಲ್ಲಿ ಅನೇಕ ಉದಾತ್ತ ತತ್ವಗಳನ್ನು ರೂಪಿಸಿಕೊಂಡಿದೆ. ಮಕ್ಕಳ ಕಲ್ಯಾಣಕ್ಕಾಗಿ ನಿರ್ದಿಷ್ಟ ಕಾರ್ಯಕ್ರಮವನ್ನು ಹಾಕಿಕೊಂಡಿದೆ. ಪ್ರಪಂಚದ ಸಕಲ ರಾಷ್ಟ್ರಗಳಿಗೆ, ಮಕ್ಕಳ ಹಿತೈಷಿ

ಗಳಾದ ಸಂಘಸಂಸ್ಥೆಗಳಿಗೆ, ತಂದೆತಾಯಿಗಳಿಗೆ ಈ ವಿಷಯದಲ್ಲಿ ನಿರ್ದಿಷ್ಟವಾದ ನಿರ್ದೇಶನಗಳನ್ನು ನೀಡಿದೆ. ಅನೇಕ ಪಾಶ್ಚಾತ್ಯ ರಾಷ್ಟ್ರಗಳು ಈ ನಿರ್ದೇಶನಗಳನ್ನು ಕೃತಿರೂಪದಲ್ಲಿ ತಂದಿವೆ.

ವ್ಯಕ್ತಿವಿಕಾಸದಲ್ಲಿ ಬಾಲ್ಯದ ಅವಧಿಯು ಮಹತ್ವ ಪೂರ್ಣವಾದುದು. ಅಂದು ಬಿತ್ತಿದ ಸುವಿಚಾರದ ಬೀಜಗಳು, ಶಿಸ್ತು ಸಂಯಮಗಳ ಸಂಪ್ರದಾಯಗಳು ಆಮರಣ ಸ್ಥಿರವಾಗಿ ಉಳಿಯುವವು. ಮಗು ಅವುಗಳನ್ನು ಸುಲಭವಾಗಿ ಆತ್ಮಸಾತ್ ಮಾಡಿಕೊಳ್ಳುವನು. 'ಮೂರು ವರುಷದ ಬುದ್ಧಿ ನೂರು ವರುಷಗಳ ವರೆಗೆ' ಎಂದು ಹಿರಿಯರು ಹೇಳುವಂತೆ ಮಗು ಬಾಲ್ಯದಲ್ಲಿ ಪಡೆಯುವ ಅನುಭವಗಳು, ಶಿಕ್ಷಣದ ಸಂಸ್ಕಾರವು ಆತನ ಶೀಲವನ್ನು ರೂಪಿಸುವಲ್ಲಿ ಸಹಕರಿಸುವುವು. ಮಗುವಿಗಾಗಿ ಗೊತ್ತುಪಡಿಸುವ ಶಿಕ್ಷಣವು ಸಹಕಾರಿಕ ಹಾಗೂ ಪರಸ್ಪರ ಸಹಾಯಕವಾದ ಜೀವನಕ್ಕೆ—'Co-operative and mutually helpful living' — ಆತನನ್ನು ಅಣಿಗೊಳಿಸುವಂತಿರ ಬೇಕು—ಎಂದು ಡ್ಯೂಯಿಯವರ ಹೇಳಿಕೆ. ಸುವಿಚಾರ, ಸದ್ಭಾವನೆಗಳಿಂದ ಪ್ರೇರಿತರಾದ ವ್ಯಕ್ತಿಗಳಿಂದಲೇ ಸುಸಂಪನ್ನ ವಾದ ರಾಷ್ಟ್ರದ ನಿರ್ಮಾಣವಾಗುವುದು.

ಖೇದದ ಸಂಗತಿಯೆಂದರೆ, ನಮ್ಮ ದೇಶದಲ್ಲಿ ಮಕ್ಕಳ ಮಹತ್ತಿಗೆ, ಅವರ ಜೀವನದ ಇತಿಕರ್ತವ್ಯತೆಗೆ ತೀರ ಸಂಕುಚಿತ ವಾದ ಸ್ವರೂಪವು ಬಂದಿದೆ. ಆರ್ಥಿಕ ಸುಸ್ಥಿತಿಯುಳ್ಳ, ಇಲ್ಲವೇ ಉಭಯತಃ ಸುಶಿಕ್ಷಿತರಾದ ತಾಯಿತಂದೆಗಳಿರುವ ಕೆಲವೇ ಕುಟುಂಬಗಳನ್ನು ಬಿಟ್ಟರೆ. ಸಾಮಾನ್ಯ ಜನತೆಯಲ್ಲಿ ಮಕ್ಕಳ ಬಗ್ಗೆ ತೀರ ಕೆಳಮಟ್ಟದ ಕಲ್ಪನೆ ಕಂಡುಬರುವುದು. 'ಗಂಡು

ಮಗು ಮುಪ್ಪಿಗೆ ಆಧಾರ ಅಥವಾ ಮುಕ್ತಿಗೆ ಮುಕ್ತದ್ವಾರ; ಹೆಣ್ಣು ಮಗು ಜೀವನಕ್ಕೆ ತಲೆಭಾರ'—ಎಂಬ ಮಕ್ಕಳ ಬಗ್ಗೆ ಅಲ್ಪತೆಯ ಈ ಭಾವನೆಯು ಅಳಿದು ಹೋಗಬೇಕು. ಮಕ್ಕಳ ಜೀವನದ ದಿವ್ಯತೆಯ ಬಗ್ಗೆ ಎಲ್ಲ ತಾಯಿತಂದೆಗಳಲ್ಲಿಯೂ ಶ್ರದ್ಧೆಯುಂಟಾಗಬೇಕು. ತಮ್ಮ ಮಕ್ಕಳ ಶ್ರೇಯೋಭಿವೃದ್ಧಿಗಳು ರಾಷ್ಟ್ರದ ಶ್ರೇಯೋಭಿವೃದ್ಧಿಗಳೊಂದಿಗೆ ಹಾಸುಹೊಕ್ಕಾಗಿ ಹೆಣೆದುಕೊಂಡಿವೆ-ಎಂಬ ಮನವರಿಕೆ ಅವರಲ್ಲಿ ದೃಡವಾಗಬೇಕು. ಮಕ್ಕಳ ಬಗ್ಗೆ ಸರಿಯಾದ ತಿಳುವಳಿಕೆಯಿಲ್ಲದಿರುವದು, ಸಂವೇದನಕ್ಷಮವಾದ ಬಾಲ್ಯದ ಎಿದುಮನಸ್ಸಿನಲ್ಲಿ ಅವರಿಗೆ ಸರಿಯಾದ ಸ್ಥಾನಮಾನಗಳನ್ನು ಒದಗಿಸದಿರುವದು, ಇಂದಿನ ಯುವಕರಲ್ಲಿ ಕಂಡುಬರುವ ಅಶಿಸ್ತು-ಅಪಕೃತ್ಯಗಳಿಗೆ ಮೂಲ ಕಾರಣವಾಗಿವೆ, ಎಂದು ವಿಚಾರವಂತರೆಲ್ಲರೂ ಹೇಳುತ್ತಿರುವರು. ಭಾರತ ಸರಕಾರಕ್ಕೂ ಈ ಮಾತಿನ ಅರಿವು ಉಂಟಾಗಿದೆ. ಮುಂಬರುವ ಪಾಂಚವಾರ್ಷಿಕ ಯೋಜನೆಗಳಲ್ಲಿ ಶಿಶುಕಲ್ಯಾಣದ ಕಾರ್ಯಕ್ರಮಗಳಿಗಾಗಿ ಹೆಚ್ಚಿನ ಆಸ್ಥೆಯನ್ನು ವಹಿಸಲಾಗಿದೆ; ಆರ್ಥಿಕ ನೆರವನ್ನೂ ನೀಡಲಾಗುವದು. ಕೊನೆಯದಾಗಿ, ಮಕ್ಕಳ ಕೈವಾರಿಯಾದ ಪ್ರೊಬೆಲ್‌ನ ಗೋರಿಯ ಮೇಲೆ ಕೆತ್ತಿರುವ, ಮಕ್ಕಳ ಮಹತಿಯ ಸಾರಸರ್ವಸ್ವದಂತಿರುವ ಮಾತು ತುಂಬಾ ಮನನೀಯವಾಗಿದೆ:—'*Come, come. Let us live for children*'-'ಬನ್ನಿ, ಬನ್ನಿ, ಮಕ್ಕಳಿಗಾಗಿ ನಾವು ಬಾಳೋಣ'.

## ಸಂದರ್ಭ ಗ್ರಂಥಗಳು

1. Progress of Education in Free India—J. C. Agrawala.
2. ಅಧ್ಯಾಪನ: ಶಾಸ್ತ್ರ ಹಾಗೂ ಕಲೆ—S. B. Gajendra-gad.
3. ಶಿಕ್ಷಣ: ತತ್ವ ಹಾಗೂ ತಂತ್ರ—S. B. Gajendragad.
4. UNESCO Pamphlets.

## ಪ್ರಚಾರೋಪನ್ಯಾಸ ಮಾಲೆ

| | |
|---|---|
| ನಕ್ಷತ್ರ ಲೋಕ | ಜಿ. ಟಿ. ನಾರಾಯಣರಾವ್ |
| ಹವಾನುಕೂಲನ ಮತ್ತು ಪ್ರಶೀತನ | ಕೆ. ವಿ. ಸುಬ್ಬರಾಯು |
| ಪಾನೀಯಗಳು | ಕೆ. ಎಸ್. ಲಕ್ಷ್ಮಣರಾವ್ |
| ಚಂದ್ರಲೋಕ ಯಾತ್ರೆ | ಪಿ. ಎಸ್. ವೆಂಕಟಸ್ವಾಮಿಶೆಟ್ಟಿ |
| ಬೆಳಕಿನ ಸ್ವರೂಪ | ಬಿ. ವಿ. ನಾರಾಯಣರಾವ್ |
| ದೂರದರ್ಶನ | ಕೆ. ಶೇಷಾದ್ರಿ ಅಯ್ಯಂಗಾರ್ |
| ಸೂಕ್ಷ್ಮದರ್ಶಕಗಳು ಮತ್ತು ದೂರದರ್ಶಕಗಳು | ಕೆ. ಶೇಷಾದ್ರಿ ಅಯ್ಯಂಗಾರ್ |
| ಉಕ್ಕು : ತಯಾರಿಕೆ ಮತ್ತು ರಚನೆ | ಕೆ. ಆರ್. ಮೋಹನ್ |
| ನೀರಾವರಿ ಸಮಸ್ಯೆಗಳು | ಕೆ. ಎನ್. ಶಿವಶಂಕರರಾವ್ |
| ಅಂತರ್ಜಲ | ಸಿ. ನಾಗಣ್ಣ |
| ಮಾನವ ನಿರ್ಮಿತ ಧಾತುಗಳು | ಎಸ್. ವೆಂಕಟೇಶಮೂರ್ತಿ |
| ಕರ್ನಾಟಕ ಅಂತರ್ಜಲ ಸಂಪನ್ಮೂಲಾಭಿವೃದ್ಧಿ | ವೈ. ಲಿಂಗರಾಜು |
| ಮಾನವನ ಮೇಲೆ ಗ್ರಹಗಳ ಪ್ರಭಾವ ಉಂಟೆ? | ಎನ್. ಕೆ. ನರಸಿಂಹಮೂರ್ತಿ |
| ಆನುವಂಶೀಯತೆ ಮತ್ತು ವೈವಿಧ್ಯ | ಎಂ. ಎಸ್ ಎಸ್. ರಾವ್ |
| ದ್ಯುತಿ ವಿದ್ಯುತ್ ಪರಿಣಾಮ | ಕೆ. ನಾಗರಾಜನ್ |
| ಮಾನವ ಮತ್ತು ಪಾಚಿಗಳು | ವಿ. ಎಸ್. ಯಲವಿಗಿ |
| ಕಪ್ಪು ರಂಧ್ರಗಳು | ವಿ. ಟಿ. ಎಸ್. ಶರ್ಮ |